# ಪು ನ ರಾ ಗ ಮ ನ

(ಐತಿಹಾಸಿಕ ಕಾದಂಬರಿ)

ಇದೊಂದು ಜಯಪುರವನ್ನು ಕ್ಷೇತ್ರವಾಗಿ ತೆಗೆದುಕೊಂಡು ಬರೆದಕಥೆ. ಈ ಕಾದಂಬರಿಯಲ್ಲಿ ರಾಜಪುತಾನದ ಅಬುಪರ್ವತ ಪ್ರದೇಶದಲ್ಲಿದ್ದ ಕಲಾವಿದರಾದ ಕೆಲವರು ಒಂದು ಕಲಾಸಂಸ್ಥೆಯನ್ನು ಹೇಗೆ ಜೀರ್ಣೋದ್ಧಾರ ಮಾಡಿದರು ಎಂಬ ವಿಚಾರವನ್ನು ಲೇಶ ಮಾತ್ರ ಐತಿಹಾಸಿಕ ಮೂಲವನ್ನು ಮನೋಹರವಾಗಿ ಬೆಳಸಿ ನಿರೂಪಿಸಿದ್ದಾರೆ. ಕಥೆಯು ಆಕರ್ಷಕವಾಗಿದೆ.

**ಬೆಲೆ ರೂ. ೧ ೪ ೦**

**ಎಚ್. ಎನ್. ರಾವ್ ಬ್ರದರ್ಸ್,**
ಬೆಂಗಳೂರು ನಗರ.

# ವೃಷ್ಟಿಧಾರೆ

(ಅನುವಾದಿತ ಕಥೆಗಳು)



ಧನ್ವಂತ

1949



ಎಚ್. ಎಸ್. ರಾವ್ ಬ್ರದರ್ಸ್
ಚಿಕ್ಕಪೇಟೆ, ಬೆಂಗಳೂರು ನಗರ

# ಮುನ್ನುಡಿ

ಈ "ವೃಷ್ಟಿಧಾರೆ" ಸಂಕಲನದಲ್ಲಿ ೧೦ ಅನುವಾದಿತ ಕಥೆಗಳು ಸಂಗ್ರಹಿತವಾಗಿವೆ. ಅನ್ಯಭಾಷಾ ಸಾಹಿತ್ಯದಲ್ಲಿ ನಮ್ಮಲ್ಲಿರುವ ಹಾಗೆ ಆಣಿಮುತ್ತುಗಳಿವೆ ಎಂಬುದನ್ನು ಈ ಕಥೆಗಳು ಸ್ಪಷ್ಟಪಡಿಸುತ್ತವೆ.

ಈ ಮೊದಲು ಇಲ್ಲಿನ ಕೆಲವು ಕಥೆಗಳು 'ಪ್ರಜಾಮತ', 'ರಾಷ್ಟ್ರಬಂಧು' ಮತ್ತು 'ಕಥಾವಳಿ' ಮೊದಲಾದ ಪತ್ರಿಕೆಗಳಲ್ಲಿ ಬೆಳಕನ್ನು ಕಂಡಿವೆ. ಮೊದಲಾಗಿ ಪ್ರಕಟಿಸಿದ ಈ ಪತ್ರಿಕೆಯವರಿಗೂ ಅಂದವಾಗಿ ಮುದ್ರಿಸಿಕೊಟ್ಟ ಉಷಾ ಪ್ರೆಸ್ಸಿನವರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಬೆಂಗಳೂರು,
ತಾ|| ೧೪-೧-೪೯.

"ಧನ್ವಂತ"

# ಪರಿವಿಡಿ


| | ಪುಟ |
|---|---|
| ದೇವಗಾನ (ಇಂಗ್ಲೀಷ್) .... .... | ೫ |
| ಪ್ರತಿಫಲ (ಹಿಂದಿ) .... .... | ೭ |
| ನಿರಾಶ್ರಿತ (ಅನತೊಲ ಫ್ರಾನ್ಸ್) .... | ೧೧ |
| ಅವನೊಬ್ಬ ಕೈದಿ (ಇಂಗ್ಲೀಷ್) .... | ೧೮ |
| ಕೆಂಪು ಪೆಟ್ಟು (ಅರಬ್ಬಿ) .... .... | ೨೩ |
| ಮಾತುಗಾರ (ಚಕಾ) .... .... | ೩೩ |
| ಚದುರಂಗದ ಕಥೆ (ಪ್ರೇಮ್‌ಚಂದ್) .... | ೩೭ |
| ನನಗೆ ಬಂದ ಆಹ್ವಾನ (ಉಡ್‌ಹೌಸ್) .... | ೫೪ |
| ಗಂಡು – ಹೆಣ್ಣು (ಸುರೇಶ್ಚಂದ್ರ ಚಕ್ರವರ್ತಿ) .... | ೫೮ |
| ದುರಂತ ಪ್ರಕರಣ (ಬಂಗಾಳಿಯಿಂದ) .... | ೬೧ |

# ದೇವಗಾನ

ಸುರಬಾಯ (Surabaya) ಜಾವಾದ್ವೀಪದ ಒಂದು ನಗರ. ಅಲ್ಲಿ, ಒಂದು ಮುಖ್ಯವಾದ, ಪವಿತ್ರವಾದ ಕ್ರಿಸ್ತ ದೇವಾಲಯವಿದೆ. ಮಹಾ ಸಮರಕಾಲ ದಲ್ಲಿ ನಡೆದ ಅದ್ಭುತವಾದ ವಿಷಯವನ್ನೇ ಈ ಕಥೆಯು ತಿಳಿಸುತ್ತದೆ. ನಗರದ ಮುಖ್ಯಬೀದಿಯಲ್ಲಿಯೇ ದೇವಾಲಯವಿರುವುದು. (Adventist Church) ಜನಾದರಣೀಯವಾದ ದೇವಾಲಯ. ಸಾವಿರಾರು ಜನರು ಪ್ರಾರ್ಥನೆಗೆ ಅಲ್ಲಿ ಸೇರುತ್ತಿದ್ದುದು ಸಾಮಾನ್ಯ ವಿಷಯ. ಈ ದೇವಾಲಯ ತನ್ನದೇ ಆದ ಮಹತ್ವವನ್ನು ಗಳಿಸಿಗೊಂಡಂತಹ ಪ್ರಾರ್ಥನಾಲಯವಾಗಿತ್ತು.

ಯುದ್ಧ, ಅದರಲ್ಲೂ ಆಧುನಿಕ ಮಹಾಯುದ್ಧವೆಂದರೆ ತೀರಿತಲ್ಲವೆ! ಒಂದು ಬಾರಿ ಯುದ್ಧದ ಜ್ವಾಲೆಗೆ ಈ ನಗರವೂ ಸಿಕ್ಕಿಬಿತ್ತು. ಧಾಳಿ ನಡೆಯುತ್ತಿದ್ದಾಗ ಒಮ್ಮೆ ಸಾವಿರಾರು ಜನರು ದೇವಾಲಯದಲ್ಲಿ ಸಿಕ್ಕಿ ಬಿದ್ದರು. ಬಾಂಬು ಸಿಡಿತ ಮತ್ತು ವಿಮಾನಧಾಳಿಗೆ ಎದುರೇನು? ವಿಮಾನ ಕಾಣಿಸಿಕೊಂಡು, ಶತ್ರುಗಳ ಕಾರ್ಯಾಚರಣೆ ಬಾಂಬುಗಳ ಉತ್ಪಾತ ಎಲ್ಲೆಲ್ಲೂ ಕಾಣಿಸಿಕೊಂಡು, ನಗರವೆಲ್ಲಾ ಉರಿಯುತ್ತಿತ್ತು. ದೇವಾಲಯ ದಲ್ಲಿದ್ದ ಜನರಿಗೆ ಪೂರ್ಣವಾಗಿ ಭೀಕರ ಪರಿಣಾಮ ಕಣ್ಣಿಗೆ ಕಾಣುವ ಹಾಗಿರಲಿಲ್ಲ. ಅವರೆಲ್ಲಾ ಭಯದಿಂದ ದಿಕ್ಕುತೋಚದೆ ಮೂಕರಾಗಿ ಹೋಗಿದ್ದರು.

"ನೀವು ಹೆದರಲೇನು ಕಾರಣ? ದೈವ ನಿಮ್ಮನ್ನು ರಕ್ಷಿಸುವನೆಂದು ಅಭಯ ಕೊಟ್ಟಿಲ್ಲವೆ! ನೀವು ಅದನ್ನು ಮರೆತಿರುವಿರಾ? ಪೂರ್ಣ ನಂಬಿಕೆ ಯಿಂದ ಅವನನ್ನೇ ಪ್ರಾರ್ಥಿಸುತ್ತಾ ನಾವೆಲ್ಲರೂ ಇಲ್ಲಿ ಅಡಗಿಕೊಳ್ಳೋಣ" ಎಂದು ವಯಸ್ಸು ತುಂಬಿದ ಪಾದ್ರಿ ಅವರಿಗೆಲ್ಲಾ ತಿಳಿಸಿದ. ಆಗ ಜನರು, ಹೆಚ್ಚಾಗಿ ಹೆಂಗಸರೂ, ಮಕ್ಕಳೂ ತುಂಬಿದ್ದ ದೇವಾಲಯದಲ್ಲಿ ಸದ್ದು ಅಡಗಿ ಹೋಯಿತು. ಮೂಕರಾಗಿ ಹೋಗಿದ್ದವರು "ಕ್ರೈಸ್ತ ಸಂದೇಶ"ವನ್ನು ನೆನೆಯುತ್ತಾ ಅಡಗಿಕೊಂಡು ಕುಳಿತಿದ್ದರು.

ಅವರಿಗೆ ರಕ್ಷಣೆ ಹೇಗೆ ಸಿಕ್ಕಿತು? ಭಯದಿಂದ ಅಡಗಿದ್ದ ಜನರಿಗೆ ಕ್ರಮುಕ್ರಮವಾಗಿ ಮಧುರ ಮಂಜುಳವಾದ ಗಂಧರ್ವಗಾನವು ದೇವಾಲಯ ದಲ್ಲೆಲ್ಲಾ ತುಂಬಿಕೊಂಡು ಧ್ವನಿಮಾಡುತ್ತಿರುವುದಾಗಿ ಭಾಸವಾಯಿತು. ಹೊರಗಡೆ ಆಗ ಆಸ್ಫೋಟನೆ ಆರ್ಭಟಗಳು ನಡೆಯುತ್ತಲೇ ಇದ್ದವು. ಈ ಮಾಂತ್ರಿಕ ಶಕ್ತಿಗೆ ಎಲ್ಲರೂ ಬೆರಗಾಗಿ ಆನಂದದಿಂದ ತಮ್ಮನ್ನು ಕಾಯ್ದು ಕೊಂಡಂತಹ ದೇವನನ್ನು ನೆನೆಯುತ್ತಾ ಭೀತಿಯನ್ನು ಬಿಟ್ಟಿದ್ದರು.

ಶತ್ರುಗಳ ವಿಮಾನ ಹಿಂತಿರುಗಿತೆಂದು, ಸುರಕ್ಷಿತ ಎಡೆಯಲ್ಲಿ ಅಡ ಗಿದ್ದವರೆಲ್ಲ ಹೊರಗೆ ಭೀತಿಬಿಟ್ಟು ಇನ್ನು ಬರಬಹುದೆಂದು ಸೂಚಕಧ್ವನಿ ಯಾಯಿತು. ಅಡಗಿದ್ದ ಭೀತರಾದ ಜನರು, ದೇವಾಲಯದಿಂದ ಹೊರಕ್ಕೆ ಬರುವ ಮೊದಲೇ, ಬಹಳ ಜನರು ಹೊರಗಡೆ ಕೋಪದಿಂದ ಆರ್ಭಟಿಸು ತ್ತಿರುವುದು ಪಾದ್ರಿಗೆ ತಿಳಿಯಿತು. ಅವನು ಮುಂದಾಗಿ ಗಲಭೆಗೆ ಕಾರಣ ವೇನೆಂದು ಹೊರಗೆ ಬಂದ. "ನಗರ ದಗ್ಧವಾಗಿ, ಪ್ರಾಣಗಳು ಉರುಳುತಿರು ವಾಗ ದೇವಾಲಯದಲ್ಲಿ ಗಾನವೇಕೆ? ಇಲ್ಲಿ ಹಾಡುತ್ತಿದ್ದವರು ಯಾರು?" ಎಂದು ನಗರ ರಕ್ಷಕರು ಪಾದ್ರಿಯನ್ನು ಬೆದರಿಸಿದರು.

ಶಾಂತಿಸ್ವರೂಪ ಪಾದ್ರಿ "ಇಲ್ಲಿ ಹಾಡುತ್ತಿದ್ದವರು ಯಾರೋ? ಬಲ್ಲ ವರು ಯಾರು?" ಎಂದವನು, "ದಳದವರು ಒಳಗೆ ಬಂದು ಕಾಣಬಹುದೆಂದು ಸೂಚಿಸಿದನು." ಜನರಾರೂ ಇಲ್ಲಿ ಹಾಡುತ್ತಿಲ್ಲ, ಸೋಜಿಗವಾಗಿ ಕಾಣು ತ್ತಿದೆ; ಜನರು ಭೀತರಾಗಿ ಮುಚ್ಚಿಟ್ಟುಕೊಂಡಿದ್ದಾರೆ. ಯಾವ ಸ್ಫೋಟ ನಕ್ಕೂ ಸಿಗದೆ ದೇವಾಲಯ ಭದ್ರವಾಗಿದೆ. ಜೀವಭಯಕ್ಕಾಗಿ ನಡುಗು ತ್ತಿರುವವರು ಹಾಡುವುದೆಲ್ಲಿಂದ ಬಂತು! ಎಲ್ಲರೂ ಆನಂದಗೊಳ್ಳುವಂತೆ, ಮೈಮರೆಯುವಂತೆ. ಹಾಗಾದರೆ ಹಾಡುತ್ತಿದ್ದವರು ಯಾರಿರಬಹುದು?" ಎನ್ನುತ್ತಾ ದಳದವರು ಆಶ್ಚರ್ಯಪಡುತ್ತಾ ಹೊರಟುಹೋದರು.

ಅಡಗಿದ್ದ ಜನರೆಲ್ಲಾ ತಮ್ಮನ್ನು ಸಮಾಧಾನದಿಂದಿರುವಂತೆ ಬೇಡಿ ಕೊಂಡ ಶಾಂತಿಸ್ವರೂಪ ಪಾದ್ರಿಯನ್ನು ಹೊಗಳುತ್ತಾ, ಜ್ಞಾನಸ್ನಾನದ ತೀರ್ಥ (Baptismal Tank) ವಿದ್ದ ಬಳಿಗೆ ಬಂದು, ಪುಣ್ಯೋದಕವನ್ನು ಸ್ವೀಕರಿಸಿ, ದೇವಗಾನವನ್ನೂ, ರಕ್ಷಿಸಿದ ದೇವತೆಯನ್ನೂ, ಶಾಂತಿಪುರುಷ ನನ್ನೂ ಹೊಗಳುತ್ತಾ ಹೊರಕ್ಕೆ ಬರುತ್ತಿದ್ದರು.

"ನಿಮ್ಮನ್ನು ರಕ್ಷಿಸಿದವನು, ದೇವಗಾನವನ್ನು ಹಾಡಿದ ದೇವತೆಯಲ್ಲದೆ ಮತ್ತಾರೂ ಅಲ್ಲ! ಕ್ರೈಸ್ತ ಸಂದೇಶದ ಮೂವತ್ತನಾಲ್ಕನೆಯ ಗೀತವನ್ನು ನೀವೆಲ್ಲರೂ ಪಠಿಸಲಿಲ್ಲವೆ? ಸೋಜಿಗವೇನು ಬಂತು! ಅದರ ಅರ್ಥ ನಿಮ್ಮನ್ನೂ, ದೇವಾಲಯವನ್ನೂ ಕಾಪಾಡಿತೆಂದು ಪಾದ್ರಿ ಗೀತದ ಪಂಕ್ತಿಯನ್ನು ಅವರಿಗೆ ಸೂಚಿಸಿದ.

"Send the angels Lord, to encamp round about them that fear him and deliverth them."

---

# ಪ್ರತಿಫಲ

ಒಂದು ಸಣ್ಣ ಸಂಸ್ಥಾನ. ಸುತ್ತ ನೀರಿನಿಂದ ಆವರಿಸಿದ ಪ್ರದೇಶದಲ್ಲಿ ಸಂಸ್ಥಾನದ ಅರಮನೆಯಿದ್ದಿತು. ಅರಮನೆ ಸುಂದರವಾದ ಅರಮನೆ. ಆದರೆ ಅರಸ, ಜನರ ಕೋಪಕ್ಕೆ ಕಾರಣನಾಗಿದ್ದ. ಅವನು ಶ್ಯಾಮಲ ವರ್ಣದ ಜಿಪ್ಸಿ ಹೆಂಗಸಿನ ಮಾಯಾಜಾಲದಲ್ಲಿ ಸಿಕ್ಕಿ, ಹಗಲುರಾತ್ರಿಯೆನ್ನದೆ ಕಾಲ ಕಳೆಯುತ್ತಾ ರಾಜ್ಯವನ್ನು ಮರೆತಿದ್ದ. ರಾಜ್ಯದ ಇತರ ಕೆಲಸಗಳೆಲ್ಲಾ ಮೂಲೆಗೆ ಬಿದ್ದವು. ಮಹಾರಾಜನ ಹೆಂಡತಿ ಮಹಾರಾಣಿಗೂ ಈ ಆಲಸ್ಯ ವರ್ತನೆ ಕಂಡಿತು. ಅವಳು ತೊಡುತ್ತಿದ್ದ ಅಮೂಲ್ಯ ಒಡವೆವಸ್ತುಗಳು ಕೊನೆಗೆ ಜಿಪ್ಸಿ ಹೆಂಗಸಿನ ಅಲಂಕಾರಕ್ಕೆ ಸೇರಿಹೋಯಿತು. ರಾಣಿ ಒಡವೆ ಹೋಯಿತೆಂದು ವ್ಯಸನಪಡಲಿಲ್ಲ. ಕಣ್ಣೀರಿಡುತ್ತಾ ತನ್ನ ದೌರ್ಭಾಗ್ಯವನ್ನು ಹಳಿದುಕೊಳ್ಳುತ್ತಾ ಕುಳಿತುಬಿಟ್ಟಳು.

ರಾಣಿಗೆ ಅರಸನಲ್ಲಿ ಬಲು ಪ್ರೀತಿ. "ಮತ್ತೆಂದಿಗೆ ಅರಸನ ಸೌಂದರ್ಯವನ್ನು ಕಾಣುವೆ" ಎನ್ನುತ್ತಾ ರಾಣಿ ಹಲುಬುತ್ತಿದ್ದಳು. ದಾಸಿಯರು ರಾಣಿಯ ಮನಸ್ಸನ್ನು, ಕ್ಲೇಶವನ್ನು ತಿದ್ದಿ ತಿರುಗಿಸಲು ಬೇಕಾದಷ್ಟು ನಯವಾದ ರೇಶಿಮೆಯ ಪತ್ತಲಗಳನ್ನು ತಂದುಕೊಟ್ಟರು. "ಪ್ರೀತಿಗೆ ಮೋಸ

ವಾಗಿರುವಾಗ ಪತ್ತಲದಿಂದೇನು?" ಎನ್ನುತ್ತಾ ರಾಣಿ ಎಲ್ಲವನ್ನೂ ಒತ್ತರಿಸಿ ಕಣ್ಣೀರಿಡುತ್ತಿದ್ದಳು. ಕೊನೆಗೂ ರಾಣಿ ರಾಜನನ್ನು ಮರೆಯಲಾಗಲಿಲ್ಲ, ಕೊರಗೂ ಕಡಿಮೆಯಾಗಲಿಲ್ಲ.

ಜಿಪ್ಸಿ ಹೆಂಗಸಿನ ತಾರುಣ್ಯವೆಲ್ಲಾ ಕಳೆಯಿತು. ಅವಳಿಗೆ ಮಕ್ಕಳಾಗ ಲಿಲ್ಲ. ಅರಸುಗುವರಸಿಲ್ಲದಿದ್ದಲ್ಲ ರಾಜ್ಯವು ಹೇಗೆ ಬಾಳಬೇಕು? ಈ ಚಿಂತೆ ಹೊಸದಾಗಿ ತಲೆದೋರಿತು. ಮೊದಲು ಮೆಲ್ಲಗೆ ನಂತರ ಗೊಣಗು ಗಟ್ಟಿ ಯಾಗಿ ರಾಜ್ಯದಲ್ಲೆಲ್ಲಾ ಹಬ್ಬಿತು. ರಾಜನ ಆಲಸ್ಯವರ್ತನೆ, ಅವಿವೇಕ ತನವನ್ನು ಜನರು ಸಿಕ್ಕಾಪಟ್ಟೆ ಜರಿಯಲಾರಂಭಿಸಿದರು. ರಾಜ್ಯಕ್ಕೊದಗಿದ ಅಪಮಾನ ರಾಣಿಯ ಕಿವಿಗೆ ಮುಟ್ಟಿತು. ಎಲ್ಲರಿಗಿಂತಲೂ ಹೆಚ್ಚಾಗಿ ರಾಣಿ ವ್ಯಸನಪಡುತ್ತಾ ಕಳಾವಿಹೀನಳಾಗಿ ಕರಗುತ್ತಿದ್ದಳು.

ಒಂದು ದಿನ ಸ್ವಾಮಿಭಕ್ತಳಾದ ರಾಜಸೇವಕಿ ರಾಣಿವಾಸಕ್ಕೆ ಬಂದು "ತಾಯಿ! ರಾಜ್ಯಕ್ಕೊದಗಿರುವ ಅಪಾಯದಿಂದ ಪಾರಾಗಲು ದಾರಿ ಯಿಲ್ಲವೆ? ಯತ್ನಿಸುವುದಿಲ್ಲವೆ? ಉಪಾಯ ಯಾವುದೂ ಇಲ್ಲವೆ?" ಎಂದು ಬೇಡಿಕೊಂಡಳು. ರಾಣಿ ಮಾತನಾಡಲಿಲ್ಲ. ಅವಳಿಗೆ ಯಾವ ಉಪಾಯವೂ ಹೊಳೆದಿರಲಿಲ್ಲ. ರಾಜಸೇವಕಿ ಧೈರ್ಯದಿಂದ ರಾಣಿಯನ್ನು ಮರೆಗೆ ಕರೆದು ಕಿವಿಯಲ್ಲಿ ರಹಸ್ಯವಾಗಿ ಒಂದು ಉಪಾಯ ಸೂಚಿಸಿ, ರಾಣಿಯನ್ನು ಬಲ ವಂತದಿಂದ ಒಪ್ಪುವಂತೆ ಮಾಡಿದಳು. "ಜಿಪ್ಸಿ ಹೆಂಗಸನ್ನು ರಾಜನ ದೃಷ್ಟಿ ಪಥದಿಂದ ಒಂದು ರಾತ್ರಿ ಎಳೆದೊಯ್ಯುವೆವು. ನೀವು ಅವಳ ತೊಡಿಗೆಯಲ್ಲಿ ರಾಜನ ಶಯ್ಯಾಗೃಹ ಹೊಕ್ಕು, ಅವನ ಹೃದಯವನ್ನು ಒಲಿಸಿ ಮನಸ್ಸು ತಿದ್ದಿಕೊಳ್ಳಿ" ಎಂದು ರಾಜಸೇವಕಿ ಸಲಹೆಕೊಟ್ಟಳು. ಅಷ್ಟೇ ಅಲ್ಲ, ರಾಜನ ಮನಸ್ಸನ್ನು ಆಕರ್ಷಿಸಿ, ಆತನ ಹಂಬಲು ತೀರುವಂತಹ ವಶೀಕರಣ ವಿದ್ಯೆ ಯನ್ನು ಚದುರೆಯಾದ ರಾಜಸೇವಕಿ ರಾಣಿಗೆ ಬೋಧಿಸಿದಳು.

ಒಂದು ಗೊತ್ತಾದ ದಿನ ರಾಣಿ ರಾಜನ ಹೃದಯವನ್ನು ವಶಮಾಡಿ ಕೊಳ್ಳಲು, ಚಿತ್ತ ತಿರುಗಿಸಿಕೊಳ್ಳಲು ಜಿಪ್ಸಿ ಉಡುಗೆಯಲ್ಲಿ ಶಯ್ಯಾಗೃಹ ವನ್ನು ಪ್ರವೇಶಿಸಿದಳು. ರಾಜನ ಹೃದಯದ ಮೇಲೆ ಸಂತೋಷದಿಂದ ಶಿರವನ್ನಿಟ್ಟು, ಅವನು ಪ್ರಸನ್ನನಾಗಿರುವಾಗಲೇ ಕಾರ್ಯ ಸಾಧಿಸಿಕೊಳ್ಳ

ಬೇಕೆಂದು ರಾಣಿ ಎಚ್ಚರಿಕೆಯಿಂದಿದ್ದಳು. ರಾಣಿಗೆ ತೀರಿದ ಆಸೆ ಕಾಡಿಸುತ್ತಲೇಯಿದ್ದಿತು. ರಾಜ್ಯಕ್ಕೆ ಉತ್ತರಾಧಿಕಾರಿಯಿಲ್ಲ. ತನಗೆ ಮಕ್ಕಳಿಲ್ಲ. ರಾಜನ ಮನಸ್ಸು ನೆಮ್ಮದಿಯಲ್ಲಿಲ್ಲ ಎಂದವಳು ಅಳುಕುತ್ತಲೇಯಿದ್ದಳು. ಹೇಗಾದರೂ ಈ ಎಲ್ಲ ಶುಭಶಕುನದ ಫಲವಾಗಿ ತನಗೊಬ್ಬ ಕುಮಾರ ಜನಿಸಿದರೆ ಸಾಕೆಂದು ರಾಣಿ ಅತ್ಯಾಶೆಯಿಂದ ಈ ಭಯಂಕರವಾದ ಸಾಹಸಕ್ಕೆ ಕೈಹಾಕಿದ್ದಳು.

"ನೀವು ಈ ಸಾಹಸಕ್ಕೆ ಮನಸ್ಸುಗೊಡದಿದ್ದರೆ ಆಗದು. ನಿಮ್ಮ ಪ್ರತಿಸ್ಪರ್ಧಿ ಜಿಪ್ಸಿ ಹೆಂಗಸನ್ನು ರಾಜ್ಯದಿಂದ ಹೊರಹಾಕುವುದಕ್ಕಾಗುವುದಿಲ್ಲ. ರಾಜ್ಯಕ್ಕೆ ದಿಕ್ಕಿಲ್ಲದೇ ಹೋಗುವುದು. ಅಪಮಾನದಿಂದ, ರಾಜನ ಆಲಸ್ಯ ವರ್ತನೆಯಿಂದ ಎಲ್ಲವೂ ಹಾಳಾಗುವುದು ಖಂಡಿತ"ವೆಂದು ರಾಜಸೇವಕಿ ಬಹುವಿಧದಿಂದ ರಾಣಿಯನ್ನು ಪ್ರೋತ್ಸಾಹಿಸಿ ಕಳುಹಿಸಿಕೊಟ್ಟಿದ್ದಳು. ರಾಣಿ ಬಹು ಯೋಚಿಸಿ ಕಷ್ಟಮಯವಾದ ಕೆಲಸಕ್ಕೆ ಮನಸ್ಸುಕೊಟ್ಟಿದ್ದಳು.

ಎಷ್ಟು ಎಚ್ಚರಿಸಿದರೇನು? ರಾಜ ಅಮಲಿನಲ್ಲಿದ್ದುದರಿಂದ ರಾಣಿಯನ್ನು ಜಿಪ್ಸಿ ಹೆಂಗಸೆಂದೇ ತಿಳಿದು ರಾತ್ರಿಯನ್ನು ಕಳೆದ. "ಆಕಾಶದಲ್ಲಿ ಬೆಳಕು ಕಾಣಿಸಿಕೊಳ್ಳುವ ಮೊದಲೇ ರಾಜ ಪ್ರೀತಿ ಅಮಲನ್ನು ಬಿಟ್ಟು ಏಳುವ ಮೊದಲೇ ಶಯ್ಯಾಗೃಹವನ್ನು ತ್ಯಜಿಸುವುದು" ಎಂದು ರಾಜಸೇವಕಿಯು ಹೇಳಿಕೊಟ್ಟ ಎಚ್ಚರಿಕೆಯ ಮಾತು ರಾಣಿ, ಪೂರ್ಣವಾಗಿ ಮರೆತು ಮಲಗಿಬಿಟ್ಟಳು.

ಆಸೆ ಫಲಿಸಿದಮೇಲೆ ಅನುಕೂಲವೇಳೆಯಲ್ಲಿ ನಮ್ಮ ಠಕ್ಕುತನವನ್ನು ರಾಜನಿಗೆ ವಿವರಿಸಿದರಾಯಿತು. ಮೊದಲು ನನ್ನ ಆಸೆ ಆಕಾಂಕ್ಷೆಗಳು ಪೂರೈಸಲಿ ಎಂದು ರಾಣಿ, ಅರಸನ ನಡುವಿನಲ್ಲಿದ್ದ ಸಣ್ಣ ಅಲುಗಿನ ಕಠಾರಿಯನ್ನು ನೆನೆದು ಒಮ್ಮೆ ನಡುಗಿದಳು. ತಾನಾಡುತ್ತಿರುವ ಆಟ ಬಯಲಾದರೆ, ಮೋಸವಾದರೆ ಈ ಕಠಾರಿಯಿಂದಲೇ ಪ್ರಾಣ ಕೊನೆಗಾಣುವುದೆಂದು ಅವಳು ನೆನೆದಳು. ಪ್ರೀತಿ ಮಾತುಗಳು ಪ್ರೇಮಾದಾವರಣದಲ್ಲಿ ರಾತ್ರಿಯಲ್ಲಿ ಎಷ್ಟೋ ನಡೆದವು. ಮದಮತ್ತ ರಾಜನಿಗೆ ದೇಹವನ್ನರ್ಪಿಸಿ, ಅವನ ಕೊರಳನ್ನು ರಾಣಿ ಆಲಂಗಿಸಿಕೊಂಡಿದ್ದಳು. ರಾತ್ರಿ ಕಳೆದು, ನಡು

ರಾತ್ರಿ ಸಮಯಕ್ಕೆ ಬಂತು. ಸೇವಕಿ "ರಾಣಿ ಕೊರಳನ್ನು ಬಿಟ್ಟು ಪಂಕ ದಿಂದ ಕೆಳಗಿಳಿದು ಬಾ" ಎಂದು ಎಚ್ಚರಿಸಿದಳು. "ಪ್ರಿಯತಮನನ್ನು ಎಲ್ಲರಿಗಿಂತಲೂ ಹೆಚ್ಚಾಗಿ ಪ್ರೀತಿಸುವವನನ್ನು ತೊರೆಯಲಾರೆ" ಎನ್ನುತ್ತಾ ರಾಣಿ, ರಾಜನನ್ನು ಅಪ್ಪಿಕೊಂಡು ಮಲಗಿಬಿಟ್ಟಳು.

ಸೇವಕಿ, ರಾಣಿಯನ್ನು ಮೂರು ಬಾರಿ ಎಚ್ಚರಿಸಿ ನಿರುಪಾಯ ಳಾದಳು. ಕಪ್ಪುತುಂಬಿದ ಆಕಾಶ ಕಪ್ಪನ್ನು ಕಳೆದು ಬಿಳಿಯ ಕಿರಣವನ್ನು ಚೆಲ್ಲಲಾರಂಭಿಸಿತು. ಭೀತಳಾದ ಸೇವಕಿ ಪ್ರಮಾದವಾಗುವುದೆಂದು ದಿಕ್ಕು ಗಾಣದೆ ಅರಮನೆಯಿಂದ ಓಡಿಹೋದಳು. ರಾಣಿ ಎಚ್ಚರದಪ್ಪಿ ಪಂಕದ ಮೇಲೆ ಮಲಗಿದ್ದಳು. ಸೂರ್ಯನ ಬಾಲಕಿರಣ ಜಾಲಂದರದಲ್ಲಿ ತೂರಿ ಕೊಂಡು ಬಂದು ರಾಜನ ಕಣ್ಣನ್ನು ಕೋರೈಸಿತು. ಅವನು ಎಚ್ಚೆತ್ತ. ತೀವ್ರನಾಗಿ ಹಾಸಿಗೆ ಬಿಟ್ಟೆದ್ದ. ನಿತ್ಯವೂ ಅವನ ಕಣ್ಣಿಗೆ ಕಾಣುತ್ತಿದ್ದ ದೀಪ್ತಮುಕ್ತಾಫಲಗಳನ್ನು ಅವನು ಕಾಣಲಿಲ್ಲ, ವೇಷಧಾರಿಣಿ ಮಹಾರಾಣಿ ಅವನ ಹಾಸಿಗೆಯಲ್ಲಿ ಪ್ರಜ್ಞಾಶೂನ್ಯಳಾಗಿ ಮಲಗಿದ್ದಳು.

ರಾಜ ಅವಳನ್ನು ಎಚ್ಚರಿಸಲಿಲ್ಲ. ಕೋಪದಿಂದ ಕುದಿಯುತ್ತಾ ಚೀರಾಡಿದ. ರಾಣಿ ಏಳುವ ಮೊದಲೇ ಅವಳ ಕೈಗಳನ್ನು ಕಿತ್ತೆಸೆದು, "ನಿನ್ನ ಠಕ್ಕುತನಕ್ಕೆ ಇದುವೆ ಪ್ರತಿಫಲ" ಎನ್ನುತ್ತಾ ಮೊನೆಯಾದ ಕಠಾರಿ ಯನ್ನು ರಾಣಿಯ ಹೃದಯಾಂತರಾಳದೊಳಗೆ ನೆಟ್ಟುಬಿಟ್ಟ.



# ನಿರಾಶ್ರಿತ

ಆಗ ಜೀವನವೂ ಬೆಳಕೂ ಪ್ರಫುಲ್ಲಿತವಾಗಿಯೇ ಇತ್ತು. ನನಗೆ ಆರು ವರ್ಷ ಮಾತ್ರ ವಯಸ್ಸು. ನಾನು, ಇನ್ನು ಪ್ರಕಾಶಮಯವಾದ ಸುಂದರ ವಾದ ಸಡಿಲವಾದ ಪ್ರಪಂಚವನ್ನು ನೋಡುತ್ತಾ ಕನಸು – ಕಲ್ಪನೆಗಳನ್ನು ನೆನೆಯುತ್ತಿದ್ದೆ.

ನನಗೆ, ವಿಶ್ವೋತ್ಪತ್ತಿಶಾಸ್ತ್ರ ಮತ್ತು ಜಗದ್ವಿವರಣೆಯನ್ನು ಕುರಿತು ಪ್ರೀತಿ. ಹೆಚ್ಚಾಗಿ, ಜಗತ್ತಿನ ವರ್ಣನೆಯನ್ನು ನಾನು ಓದುತ್ತಿದ್ದೆ. ವರ್ಣನಾಪುಸ್ತಕ ಕೈಹಿಡಿದುಕೊಂಡಾಗ ನನಗೆ ಅದೇ ಒಂದು ವಿಶ್ವವಾಗಿ ಕಾಣುತ್ತಿತ್ತು. ಹಚ್ಚಹಸುರು ಕಾಗದ ಅಂಟಿಸಿದ್ದ ಕೋಣೆಯಲ್ಲಿ ತಾಯಿ ಜತೆಯಾಗಿ ನಾನು ಮಲಗಿ ಆಡುತ್ತಿದ್ದೆ. ನಾನಿರುತ್ತಿದ್ದ ಕೋಣೆ ಮಹತ್ತಿನ ಸ್ಥಳವಾಗಿತ್ತು. ಕಾರಣ? ಕೋಣೆಗೆ ದೈವಾನುಗ್ರಹವಿದ್ದಿತೆಂದು ಹೇಳ ಬಲ್ಲೆ. ಬೆಳಕು, ದೇವನ ಶೋಭಾರಾಶಿಯೆನ್ನುತ್ತಾರಲ್ಲಾ ಅದು, ಅಷ್ಟು ಬಿದ್ದು ಉಜ್ವಲವಾಗಿ ಎಲ್ಲೆಲ್ಲಿಯೂ ಬೆಳಗುತ್ತಿತ್ತು. ದೇವನ ಚಿತ್ರಪಟ ನೋಡುವವರು ಅವನ ತೇಜೋರಾಶಿಯನ್ನು ಕಾಣುವುದಿಲ್ಲವೆ? ನಾನೂ ಕೋಣೆಯ ನಾಲ್ಕು ಗೋಡೆಗಳನ್ನು ನೋಡುತ್ತಾ ಒಂದು ವಿಧವಾದ ಚೇತನ ಸ್ವರೂಪವನ್ನು ಕಾಣುತ್ತಿದ್ದೆ.

ರಾತ್ರಿ ನಾನು ಕೋಣೆಯಲ್ಲಿ ಮಂಚದ ಮೇಲೆ ಒರಗುತ್ತಿದ್ದೆ. ಆಗ, ನನಗೆ ಅದ್ಭುತವಾದ ಲೀಲೆ ಗೋಚರಿಸುತ್ತಿದ್ದವು. ಕೊಂಬುಗಳಿದ್ದ ಚಿತ್ರ ವಿಚಿತ್ರವಾದ ಹೆಣ್ಣು–ಗಂಡು ಬೊಂಬೆಗಳು ಕೊಠಡಿಯ ತುಂಬಾ ನಾಟ್ಯ ಮಾಡುತ್ತಿದ್ದಂತೆ ತಿಳಿಯುತ್ತಿದ್ದೆ. ಕೆಲವು ವರ್ಷಗಳಾದ ನಂತರವೇ ಹಿಂದೆ ಕುಣಿಯುತ್ತಿದ್ದ ಪ್ರಾಣಿಗಳು ಭೂತದ ಮಾದರಿಯಲ್ಲವೆಂದೂ ಅವೆಲ್ಲವೂ ನನ್ನ ತಲೆಯಲ್ಲಿ ಸುಳಿಯುತ್ತಿದ್ದ ಯೋಚನಾತರಂಗಗಳೆಂದು ತಿಳಿದುಕೊಂಡೆ. ಪುಸ್ತಕಪ್ರಪಂಚದಲ್ಲಿ ಪೃಥ್ವಿ ವಿಚಾರವಾಗಿ ಏನೇನೋ ಬರೆದಿದೆ ನಿಜ

ಆದರೆ, ನನ್ನ ಅಭಿಪ್ರಾಯ ಮಾತ್ರ ಹಾಗಿರಲಿಲ್ಲ. ಜಗತ್ತಿನ ವೈಚಿತ್ರ್ಯದ ಬಗ್ಗೆ ನಾನು ಅಭಿಪ್ರಾಯಪಟ್ಟದ್ದಿಷ್ಟೆ! ಪೃಥ್ವಿ ಒಂದು ಪೆಟ್ಟಿಗೆಯಂತೆ ದೊಡ್ಡ ಆಕಾರದ ಗಾತ್ರದೆಂದೂ ಅದರಲ್ಲಿ ಆಟದ ಬೊಂಬೆಗಳು ಅಡಗಿವೆ ಯೆಂದೂ ತಿಳಿದಿದ್ದೆ. ಇವೆಲ್ಲವೂ ನನ್ನ ಬಾಲ್ಯದ ಅಸ್ಪಷ್ಟವಾದ ದ್ವಂದ್ವಾ ತೀತವಾದ ವಿಚಾರ–ಸಮಸ್ಯೆಗಳು.

ಮುಂಜಾನೆಗೆ ಮುಂಚೆಯೇ ನನ್ನನ್ನು ಎಚ್ಚರಿಸಿ, ಹೊರಗೆ ಕರೆ ದೊಯ್ಯಲು ದಾದಿ ಮುತ್ತಾಯಿ ನಮ್ಮ ಮನೆಗೆ ಬರುತ್ತಿದ್ದಳು. ಮುತ್ತಾಯಿ! ಈ ತಾಯಿಯ ಕಣ್ಣು ಕೆಂಡದಂತಿದ್ದರೂ ಹೃದಯ ಮಾತ್ರ ಮೇಣದಂತೆ ಮೃದುವಾಗಿದ್ದಿತು ಎಂದು ಹೇಳಬಲ್ಲೆ. ನನ್ನ ಪುಟ್ಟ ಪಾದ ದೂರ ಚಲಿಸ ದಂತೆ ನೋಡಿಕೊಳ್ಳುವ ಪಹಿ ಆಕೆಗೆ ಮನೆಯವರೊಪ್ಪಿಸಿದ್ದರು. ನಮ್ಮ ಮನೆಯ ಕಿಟಕಿಗಳಲ್ಲೆಲ್ಲಿಯೂ ತುಂಬಾ ಸುಂದರ ಸ್ವಚ್ಛಪುಷ್ಪಗಳನ್ನಿಟ್ಟು ಕಣ್ಣು ಮನವನ್ನು ರಂಜಿಸುವಷ್ಟುಮಟ್ಟಿಗೆ ಅಲಂಕಾರ ಮಾಡುತ್ತಿದ್ದರು. ಪ್ಯಾರಿಸ್ ನಗರದಲ್ಲಿ ನಾವಿದ್ದುದು. ನಾನು ಉಗಿಬಂಡಿಯಲ್ಲಿ ಎರಡು ಮೂರು ಸಾರಿ ಪ್ರಯಾಣಮಾಡಿದ್ದೆ. ಪ್ರಯಾಣದಿಂದೇನೂ ನನ್ನ ಕುತೂ ಹಲ – ವಿಶ್ವದ್ವಿವರಣೆ ಬೆಳೆಯಲಿಲ್ಲ. ಭೂಗೋಳಶಾಸ್ತ್ರವೆಂದರೆ ಈಗಿನಂತೆ ಆಗಲೂ ಗೋಳಿನ ಶಾಸ್ತ್ರವೆನಿಸಿ ತಿರಸ್ಕರಿಸಲ್ಪಟ್ಟಿತ್ತು.

ಗೆಲುವಾಗಿ ಯಾವಾಗಲೂ ಮಂದಸ್ಮಿತನಾಗಿ ಜೀವನವನ್ನು ತಳ್ಳುವ ಮನುಜ; ನಿಜವಾಗಿಯೂ ಜೀವನ ಸಾರಾಸಾರ ವಿಚಾರವನ್ನು ತಿಳಿಯ ನೆಂದು ನನ್ನ ಮತ. ಮಾನವನ ನಿಜವಾದ ಬೋಧಕವೆಂದರೆ ದುಃಖವೆ ಎಂದು, ನಿನ್ನ ನಂಬಿಕೆ. ದುಃಖಿಗೆ ವಿಚಾರಸರಣಿ, ನ್ಯಾಯಾನ್ಯಾಯ ಪರಿವೆಯಿರುತ್ತದೆ. ಅವನು ಸ್ವಚ್ಛವಾಗಿ ವಿಚಾರ ವಿಮರ್ಶಿಸಿಕೊಳ್ಳುತ್ತಾನೆ. ಏಕೆಂದರೆ! ನಾನು ಇನ್ನೂ ಚಿಕ್ಕವನಿದ್ದು, ಪ್ರಪಂಚದಲ್ಲಿ ಪ್ರೀತಿ ಆನಂದವೇ ತುಂಬಿರುವುದೆಂದುಕೊಂಡಿದ್ದೆ. ದುಃಖ, ಸಂಕಟ, ಭಯಂಕರ ಸಂಘಟನೆಯ ಅನುಭವ ಪಡೆದರೆ ನಿಜವಾದ ಜಗತ್ತು ಅರ್ಥವಾಗುವುದು ಎಂದು ನನಗೆ ಬಹಳ ದಿನದ ಮೇಲೆ ತಿಳಿಯಿತು. ನಾನು ಆನಂದಮಯ ಜಗತ್ತನ್ನು ಕಾಣುತ್ತಿದ್ದುದು ನಿಜ. ಈ ಪ್ರಕೃತ ಸುಲೋಚನ ವ್ಯಾಪಾರಿಯ ಕಟ್ಟ ಕಡೆಯ ದುಃಸ್ಥಿತಿ ತಿಳಿದಮೇಲೆ, ನನ್ನ ಪ್ರಾಕೃತ್ತಿಕ ಮತ್ತು ನೈತಿಕಬಲ

ಕಡಿಮೆಯೆನಿಸಿ, ಜಗತ್ತೆಲ್ಲವೂ ಒಂದು ತಾಮವರಾಂಗೆ ಸಿಕ್ಕಿದೆಯೆಂದು ಅನುಭವವಾಯಿತು. ಇನ್ನು ಕಥೆಯ ಕಡೆಗೆ ತಿರುಗೋಣ.

ಸುಲೋಚನ ಹಾರುವವನೊಬ್ಬ ಬಣ್ಣಬಣ್ಣದ ಗಾಜು ಮತ್ತು ಗಾಜಿನ ಕಟ್ಟುಗಳನ್ನು ಅಂದವಾಗಿ ಒಂದು ಚೌಕದಲ್ಲಿ ವ್ಯಾಪಾರಕಿಟ್ಟುಕೊಂಡಿದ್ದ. ಇದೆಲ್ಲವೂ ಫ್ರಾನ್ಸ್ ನಗರದಲ್ಲಿ ನಡೆದುದೆಂಬುದನ್ನು ಮರೆಯಬೇಡಿ. ಹದಿನಾಲ್ಕನೆಯ ಲೂಯಿ ಆಗ ರಾಜ್ಯಸೂತ್ರ ವಹಿಸಿಕೊಂಡಿದ್ದ. ಸುಲೋಚನನದ ಅಂಗಡಿ ಬಳಿ ಭವ್ಯ ಹೋಟೆಲ್ ಒಂದಿತ್ತು. ಫ್ರಾನ್ಸ್ ನಗರದ ಭವ್ಯ ಹೋಟೆಲ್ ಅದು. ಲೂಯಿಯಿಂದ ಪ್ರೋತ್ಸಾಹ ಬೇರೆ ಅದಕ್ಕೆ ಸಿಕ್ಕಿತ್ತು. ಈ ಪ್ರತಿಷ್ಠಿತ ಭವನದ ಹತ್ತಿರವೇಯಿದ್ದ ಸುಲೋಚನದ ಅಂಗಡಿಗೂ ಒಂದು ಮಹತ್ವ ಬಂದಿತ್ತು.

ನಾನು ಆಗಿಂದಾಗ್ಗೆ ಸುಲೋಚನನಲ್ಲಿಟ್ಟಿದ್ದ ದೊಡ್ಡದೊಡ್ಡ ಗಾಜಿನ ಬೀರುಗಳ ಮುಂದೆ ನಿಂತು ನೋಡುತ್ತಾ ನಿಲ್ಲುತ್ತಿದ್ದೆ. ವ್ಯಾಪಾರಿಗೂ ನನಗೂ ಪರಿಚಯ ಬೆಳೆಯುತ್ತಾ ಬಂತು. ನನ್ನೊಂದಿಗೆ ಯಾವಾಗಲೂ ಬರುತ್ತಿದ್ದ ದಾದಿಮುತ್ತಾಯಿ ಅವನೊಂದಿಗೆ ಸಲೀಸು ಮಾತನಾಡುತ್ತಿದ್ದಳು. ಏನೋ ವ್ಯಾಪಾರಿಯ ವಿಷಯದಲ್ಲಿ ತಾನು ಕನಿಕರಪಡುತ್ತಿರುವವಳ ಹಾಗೆ ದಾದಿಮುತ್ತಾಯಿ "ಹೇಗೆ ನಡೆದಿದೆ?" ಎಂದು ನಿತ್ಯವೂ ಪ್ರಶ್ನಿಸುತ್ತಿದ್ದಳು. ವ್ಯಾಪಾರದ ಅಂಗಡಿಯಲ್ಲಿ ಕನ್ನಡಕದ ಗಾಜು ಮತ್ತು ಕಟ್ಟುಗಳು ಮಾತ್ರವೇ ಇರಲಿಲ್ಲ. ಅಪೂರ್ವವಾದ ಕೆಲವು ಖನಿಜ ಸಂಪತ್ತುಗಳಿದ್ದವು. ಜಗದ್ವಿವರಣೆಯಲ್ಲಿ ಆಸಕ್ತನಾಗಿದ್ದ ನನಗೆ, ಈ ಸಂಪತ್ತುಗಳನ್ನು ನೋಡಿ ಆಶ್ಚರ್ಯವಾಯಿತು. ಅಂಗಡಿಯಲ್ಲಿಟ್ಟ ವಸ್ತುಗಳು ಮಾತ್ರ ಚೆನ್ನಾಗಿಯೇ ಗಾಜಿನ ಬೀರುವಿನಲ್ಲಿ ಅಂದವಾಗಿದ್ದುಕೊಂಡು ನಿದ್ದೆಹೋಗುತ್ತಿದ್ದವು. ಅಂದರೆ, ಆಕರ್ಷಕ ಸ್ಫಟಿಕ ಕಲ್ಲುಗಳನ್ನು, ಗಾಜುಗಳನ್ನು ಮತ್ತು ಅವುಗಳ ಕಟ್ಟನ್ನು ಕೊಳ್ಳಲು ಯಾರೂ ಹೆಚ್ಚಾಗಿ ಬರುತ್ತಿರಲಿಲ್ಲ. ಕಟ್ಟುಗಳಿಗೆ ಕಿಲುಬುಹಿಡಿದು ಕಪ್ಪಾಗಿ ಉಳಿಯುತ್ತಿದ್ದುದೇ ನನ್ನ ಹೇಳಿಕೆಗೆ ಉದಾಹರಣೆ.

"ಹೇಗೆ ನಡೆದಿದೆ?" ಎಂದು ದಾದಿಮುತ್ತಾಯಿ, ವ್ಯಾಪಾರಿಯನ್ನು ಮಾತನಾಡಿಸಿದರೂ ಅವನು ಬೇಗ ಉತ್ತರವೀಯುತ್ತಿರಲಿಲ್ಲ. ವಿನಯ

ದಿಂದೆ ಕೈಯನ್ನು ಕಟ್ಟಿಕೊಂಡು ದೂರದ ಕಡೆಗೆ ದೃಷ್ಟಿ ಹೊರಳಿಸಿಬಿಡುತ್ತಿದ್ದ. ಆವನು ಚಿಕ್ಕವನೆ. ಅವನ ಮೇಲುತಲೆ ಬಿಳುಪಾಗಿ, ತಾಮ್ರದಂತೆ ಹೊಳೆಯುತ್ತಿತ್ತು. ಸಂಕ್ಷಿಪ್ತ ವರ್ಣನೆಯೆಂದರೆ ಇಷ್ಟೆ. ದೊಡ್ಡತಲೆಯ ಸಣ್ಣ ಮನುಷ್ಯ ಮಾತ್ರದವನಾಗಿದ್ದ. ಅವನ ಭಯಂಕರವಾದ ಕಣ್ಣು ಮತ್ತು ನೀಳವಾದ ಕಪ್ಪು-ನೀಲಿಗಡ್ಡ ಅವನ ನೆನಪನ್ನು ತರುತ್ತಲೇ ಇರುತ್ತದೆ. ಈ ವಿಚಿತ್ರ ಮನುಷ್ಯನ ಉಡುಪು ಹಾಗೆಯೇ ವಿಚಿತ್ರತರವಾಗಿದ್ದಿತು. ಉದ್ದವಾದ ಹಸುರುಕೋಟು ಅವನ ಮೈಭಾಗವನ್ನು ಮುಚ್ಚಿತ್ತು. ಬಣ್ಣ ಮಾಸಿ, ಹಿಂಭಾಗ ಮತ್ತು ತೋಳುಭಾಗದಲ್ಲಿ ಬಣ್ಣ ಬದಲಾಯಿಸಿ ಹೋಗಿತ್ತು. ನಾನೆಲ್ಲಿಯೂ ಕಾಣದ ಅತಿ ಉದ್ದವಾದ ಹ್ಯಾಟ್ ಅವನು ಧರಿಸುತ್ತಿದ್ದ. ಶಿರೋಭೂಷಣವೆಂದರೆ ಹಸಿವು ಮತ್ತು ಹೆಮ್ಮೆಯ ಚಿಹ್ನೆಯೇ ಅಲ್ಲವೆ? ವ್ಯಾಪಾರಿಯು ಹೊತ್ತಿದ್ದ ಹ್ಯಾಟ್ ಅವನ ಆಯವ್ಯಯ, ಕಷ್ಟದುಃಖ, ಬೇಗೆ ಬಡತನವನ್ನು ತೋರುತ್ತಿತ್ತು. ಅವನ ವ್ಯಾಪಾರ ಬೆಳೆಯಲಿಲ್ಲ. ಹೆಚ್ಚೇಕೆ? ಅವನು ಸುಲೋಚನಾ ವ್ಯಾಪಾರಿಯಂತೆ ಕಾಣಿಸಿಕೊಳ್ಳುತ್ತಿರಲಿಲ್ಲ ಮತ್ತು ಅವನಿಟ್ಟುಕೊಂಡಿದ್ದ ಮಾದರಿಗಳು ಜನರು ಕೊಳ್ಳುವಂತಹವುಗಳಾಗಿರಲಿಲ್ಲ. ನಿರ್ದಯ ವಿಧಿಯೆಂಬುದಿದೆಯಲ್ಲಾ! ಅದು ಅವನನ್ನು ಹಾಗೆ ಮಾಡಿತ್ತು. ಅವನು ಭವ್ಯಭವನದ ಮುಂದುಗಡೆ ನಿಂತು, ಸೆಂಟ್ ಹೆಲಿನಾದಲ್ಲಿ ಪರಾಜಿತನಾದ ನೆಪೋಲಿಯನ್ ನೋಡುತ್ತಿದ್ದ ಹಾಗೆ ತನ್ನ ಪ್ರಾಂತ್ಯವಾದ ಟ್ರೈಟನ್ ಕಡೆಗೆ ನೋಡುತ್ತಿದ್ದ.

ನನ್ನ ಅಲ್ಪ ನೆನಪಿನಿಂದ ಹೇಳುವುದಿಷ್ಟೆ: ಅವನೊಡನೆ ನಾನು ಮಾತನಾಡುತ್ತಿದ್ದೆ. ವ್ಯಾಪಾರ ಇನ್ನಿತರ ವಿಚಾರ ಹೊರಳಿ ಅವನಿಟ್ಟುಕೊಂಡಿದ್ದ ಖನಿಜವಸ್ತುಗಳ ಬಗ್ಗೆ ತಿರುಗಿತು. ಆ ವಸ್ತುಗಳನ್ನೆಲ್ಲಾ ತಾನು ಹೇಗೆ ಸಂಪಾದಿಸಿಕೊಂಡು ಬಂದನೆಂದು ಹೇಳಲು ಅವನು ಪ್ರಾರಂಭಿಸುತ್ತಿದ್ದ ನನ್ನ ಜಗದ್ವಿವರಣೆ ಮತ್ತೆ ಬೆಳೆಯಿತು. ಅವನು ನೀರಿನ ಮೇಲೆ ಕೊನೆಯಿಲ್ಲದೆ ಪ್ರಯಾಣ ಹೊರಟುದುದನ್ನೂ, ಚೈನಾ ಅಫೀಮುಕೋರರ ಸಂಗತಿಯನ್ನೂ, ಒಮ್ಮೆ ಸ್ಪೆಯಿನಿನಲ್ಲಿ ಕುತ್ತಿಗೆ ತುತ್ತಾಗಿದ್ದುದನ್ನೂ ಹೇಳಿದನಲ್ಲದೆ, ಮಲಯಾ ಪ್ರಾಂತ್ಯದಲ್ಲಿ ಲೂಟಿಗೆ ತಾನು ಸಿಕ್ಕಿದುದನ್ನು ವಿವರಿಸಿದ. ಇಷ್ಟೆಲ್ಲಾ ಹೇಳುವಾಗ, ಅವನು ಕೈಯಾಡಿಸುತ್ತಾ ತುಟಿಯನ್ನು ಅಲುಗಾಡಿ

ಸುತ್ತಾ ತನ್ನ ಜೀವನಮಂತ್ರವಾಗಿದ್ದ ಮತ್ತು ತನ್ನನ್ನು ದುರಂತಕ್ಕೆ ತಂದೊಡ್ಡಿದ್ದ ಬಂಗಾರಬೆಳಕಿನ ಸ್ಮರಣೆ ಮಾಡುತ್ತಲೇಯಿದ್ದ.

ಇವನಂತೆ ಅನೇಕರು ಚಿನ್ನವನ್ನು ಗಳಿಸುವುದಕ್ಕೆ ಎಷ್ಟೋ ಬಾರಿ ಕ್ಯಾಲಿಫೋರ್ನಿಯಾಗೆ ಪ್ರಯಾಣ ಹೊರಟಿದ್ದರಂತೆ. ಅದ್ಭುತವಾದ ಕ್ಯಾಲಿ ಫೋರ್ನಿಯಾ ಭೂಮಿಯಲ್ಲಿ ರಾಶಿರಾಶಿಯಾಗಿ ಚಿನ್ನದ ಅದರು ತುಂಬಿರುವು ದೆಂತಲೂ ಅಷ್ಟನ್ನೂ ತಾನು ಕಟ್ಟಿಕೊಂಡು ಬರಬೇಕೆಂತಲೂ ಕನಸಿನಲ್ಲಿ ಎಣಿಸುತ್ತಿದ್ದನಂತೆ! ಗೀಚಿದರೆ ಸಾಕು ಚಿನ್ನದ ಅದರು ಸಿಗುವ ದೇಶವನ್ನು ಕಂಡು, ಅವನಿಗೆ ಎಷ್ಟೋ ಆನಂದವಾಗುತ್ತಿದ್ದಿತಂತೆ! ಅಯ್ಯೋ ಅವನ ಕನಸು ನೆನೆಸಾಗಲಿಲ್ಲವಂತೆ! ದೇಶಪರ್ಯಟನದಿಂದ ಅವನು ಬಂಗಾರ ವನ್ನು ತರದೆ, ಬಡತನವನ್ನೂ ಹಸಿವನ್ನೂ ರಷ್ಯದಿಂದ ಹೊರಟಾಗ ಸಿರಿಯಾ ನಿವಾಡವನ್ನು ಬಿಟ್ಟಂದಿನಿಂದ ತಂದನಂತೆ. ಆಗಿಂದ ಅವನಿಗೆ ಕೆಲಸದ ಮೇಲೆ ಇಚ್ಛೆಯಿರಲಿಲ್ಲ, ಮನಸ್ಸು ನಿಂತಕಡೆ ನಿಲ್ಲುತ್ತಿರಲಿಲ್ಲವಂತೆ.

ದಾದಿ ಮತಾಯಿ ಅವನು ಹೇಳುತ್ತಿದ್ದುದೆಲ್ಲವನ್ನೂ ಕೇಳುತ್ತಾ "ದೇವರು ಯಾವಾಗಲೂ ಉಚಿತನಲ್ಲ" ಎಂದು ತನ್ನೊಳಗೆ ತಾನೆ ಹೇಳಿ ಕೊಳ್ಳುತ್ತಿದ್ದಳು. ಮಾತು ತೀರಿದಮೇಲೆ ನಾವಿಬ್ಬರೂ ಬೇರೆ ಕಡೆಗೆ ಸುಳಿಯುತ್ತಿದ್ದೆವು. ನಾನು ಪೆಸಿಫಿಕ್ ಸಾಗರ, ಕ್ಯಾಲಿಫೋರ್ನಿಯಾ, ಸ್ಪೇಯಿರ್ನ್, ಚೈನಾ, ಮಲಯ ಮತ್ತು ಹೊನ್ನಿನಿಂದ ಕೂಡಿದ ಪರ್ವತ ನದಿಗಳ ನೆಲೆ ಯನ್ನು ನೆನೆಯುತ್ತಿದ್ದೆ. ವ್ಯಾಪಾರಿಯ ಅದ್ಭುತವಾದ ವಿವರಣೆಯನ್ನು ಕೇಳಿದ ನಾನು ಪ್ರಪಂಚವು ಕೊನೆಯಿಲ್ಲದೆಂದೂ ಆಶ್ಚರ್ಯಕರವಾದ ವಸ್ತು, ಪ್ರಾಣಿಗಳು ಪ್ರಪಂಚದಲ್ಲಿ ತುಂಬಾ ಅಡಕವಾಗಿದೆಯೆಂದೂ ತಿಳಿದುಕೊಂಡೆ. ನನ್ನ ಅನುಭವ ಇಷ್ಟು ಮಾತ್ರವಾಗಿರಲಿಲ್ಲ. ಪ್ರಪಂಚದಲ್ಲಿ ಆನಂದವೇ ಹೆಚ್ಚು ತುಂಬಿಲ್ಲ, ಹೆಚ್ಚಾಗಿ ದುಃಖವೂ ಅಡಗಿದೆಯೆಂದುಕೊಂಡೆ.

ನನ್ನ ತಾಯಿಯೂ ವ್ಯಾಪಾರಿಯ ಸ್ಥಿತಿಯನ್ನರಿತು "ಅವನಿಗೆ ಹೊಟ್ಟೆ ಬಟ್ಟೆಗಿಲ್ಲ"ಯೆನ್ನುತ್ತಿದ್ದಳು. ಅವನನ್ನು ನೋಡಿದಕೂಡಲೇ ನನಗೆ ಕೆಟ್ಟದೆನಿಸುತ್ತಿದ್ದರೂ ಅವನ ವಿಚಾರದಲ್ಲಿ ಕುತೂಹಲ ಹುಟ್ಟುತ್ತಿತ್ತು. ನಾವಿಬ್ಬರೂ ಆಗಾಗ ಸೇರುತ್ತಿದ್ದೆವು. ಅವನು ನಾವಿದ್ದ ಮನೆಯ ಮಹಡಿಯ

ಮೇಲೆ ವಾಸಿಸುತ್ತಿದ್ದ. ಕತ್ತಲು ಮುಸುಕಿದಕೂಡಲೇ ಎರಡು ಬಗಲುಗಳಲ್ಲಿಯೂ ಒಂದೊಂದು ಕರಿಪೆಟ್ಟಿಗೆಗಳನ್ನು ಇರಿಸಿಕೊಂಡು, ಬಹು ಕಷ್ಟದಿಂದ ಮಹಡಿಮೆಟ್ಟಿಲನ್ನು ಏರುತ್ತಿದ್ದ. ಅವನು ಹೊರುತ್ತಿದ್ದ ಪೆಟ್ಟಿಗೆಗಳಲ್ಲಿ ಸುಭೋಜನಗಳಿದ್ದುವು ನಿಜ. ಆದರೆ ಆ ಪೆಟ್ಟಿಗೆಗಳು ಹೆಣದಪೆಟ್ಟಿಗೆಗಳಾಗಿ ನನಗೆ ಕಾಣುತ್ತಿದ್ದುವು. ನಾನು ಇವನ್ನು ನೋಡಿ ಬಹಳ ಭಯಪಡುತ್ತಿದ್ದೆ.

ಒಂದು ವಸಂತಕಾಲದ ಸಂಜೆ ಆರೂವರೆ ಗಂಟೆ ಹೊತ್ತಿನಲ್ಲಿ ಈ ಘಟನೆ ಜರುಗಿತು. ನಾವು ಮನೆಯಲ್ಲಿ ಊಟಕ್ಕೆ ಕುಳಿತುಕೊಂಡಿದ್ದೆವು. ಮನೆಗೆಲಸ ನೋಡಿಕೊಳ್ಳುತ್ತಿದ್ದ ದಾದಿ, ತಂದೆಯವರೊಂದಿಗೆ "ಮಹಡಿಯ ಮೇಲೆ ವಾಸಿಸುತ್ತಿರುವ ವ್ಯಾಪಾರಿ ಬಹಳ ನರಳುತ್ತಿದ್ದಾನೆ" ಎಂದು ತಿಳಿಸಿದಳು. ಊಟ ಮುಗಿದಮೇಲೆ ತಂದೆಯವರು ಅವನನ್ನು ನೋಡುವುದಕ್ಕಾಗಿ ಮಹಡಿ ಏರಿ ನಡೆದರು. ತಿರುಗಿ ಇಳಿದು ಬಂದಮೇಲೆ ತಾಯಿಯವರು "ಅವನಿಗೇನಾಗಿದೆ?" ಎಂದು ಕೇಳಿದರು. "ಈಗ ಏನೂ ಹೇಳಲಾಗುವುದಿಲ್ಲ" ಎಂದು ಲೋಕದಲ್ಲಿ ಮಾನವನ ನೋವುಗಳನ್ನು ಚೆನ್ನಾಗಿ ಮನದಟ್ಟು ಮಾಡಿಕೊಂಡಿದ್ದ ತಂದೆಯವರು, "ಅವನಿಗೆ ಮೆದುಳು ರೋಗವೆಂದು ಕಾಣುವುದು. ವೈದ್ಯಶಾಲೆಗೆ ಹೋದರೆ ಗುಣವಾದೀತು; ಅಲ್ಲಿಯೇ ಅದಕ್ಕೆ ಸರಿಯಾದ ಚಿಕಿತ್ಸೆ ನಡೆಯುವುದು. ಅಲ್ಲಿಗೆ ಅವನೆಲ್ಲಿ ಹೋದಾನು?" ಎಂದು ಮುಗಿಸಿದರು.

"ಹಾಗಾದರೆ ಅವನೇನು ಸಾಯುವನೆ?" ಎಂದು ನಾನು ಅವರನ್ನು ಪ್ರಶ್ನಿಸಿದೆ. ಅವರು ಅದಕ್ಕೆ ಉತ್ತರವೀಯಲಿಲ್ಲ.

ಮರುದಿನ ಪ್ರಕಾಶಮಯವಾಗಿತ್ತು. ನಾನು ಊಟದ ಮನೆಯಲ್ಲಿದ್ದೆ. ರಾಶಿರಾಶಿಯಾಗಿ ಸೂರ್ಯರಶ್ಮಿ ಕಿಟಕಿಯ ತುಂಬಾ ಬಿದ್ದುದನ್ನು ನೋಡುತ್ತಿದ್ದೆ. ನಮ್ಮ ತೋಟದ ಚತುರ ವನಮಾಲಿ, ಸುವಾಸನಾಯುತವಾದ ಹೂಗಳನ್ನು ಕಿಟಕಿಗಳಲ್ಲಿರಿಸಿ ಪರಿಮಳ ತೂರಿಬರುವಂತೆ ಮಾಡಿದ್ದ. ಆಗ ನಾನು ನೌಕಾ ಆಟವಾಡುತ್ತಿದ್ದೆ. ಕುದುರೆ, ಜಿಂಕೆ, ಕರಡಿ ಮತ್ತು ಆನೆ ಬೊಂಬೆಗಳು ನನ್ನಲ್ಲಿದ್ದುವು. ಅವುಗಳು ಜಲಪ್ರಳಯಕ್ಕೆ ಸಿಕ್ಕಿದ ಹಾಗೂ ನಾನು ಅವುಗಳನ್ನು ನನ್ನ ನೌಕೆಯಲ್ಲಿಟ್ಟು ಪ್ರವಾಹದಿಂದ ದೂರವಾಗಿ

ನಾಗಿಸುತ್ತಿದ್ದ ಹಾಗೂ ನಟಿಸುತ್ತಿದ್ದೆ. ಆಟ ಮತ್ತು ಆಟದಬೊಂಬೆ ಮಕ್ಕಳ ಮನಸ್ಸಿನಮೇಲೆ ಎಂತಹ ಪರಿಣಾಮವನ್ನುಂಟುಮಾಡುತ್ತದೆ ಎಂಬುದನ್ನು ಸಾಮಾನ್ಯರು ಬಲ್ಲರೇನು? ಪ್ರಕೃತಿಯ ನಿಜವಾದ ಸಣ್ಣಬೊಂಬೆಗಳೇ ಮಕ್ಕಳು. ಪುಟ್ಟಬೊಂಬೆಗಳೇ ದೈವವಾಣಿಯ ಪ್ರಚ್ಛನ್ನಮೂರ್ತಿಗಳೆಂದು ನನ್ನ ಹೃದಯದ ತುಂಬಾ ಪ್ರೀತಿ ಕನಿಕರ ತುಂಬಿಕೊಂಡಿದ್ದೆ.

ಇದ್ದಕ್ಕಿದ್ದಹಾಗೆಯೇ ಏನೋ ಅತಿಭಾರವಾದ ವಸ್ತು ಗಗನದಿಂದ ಕೆಳಕ್ಕೆ ಬಿದ್ದಂತೆ ಕಂಡಿತು. ಭಯಂಕರ ಶಬ್ದ ಮಾತ್ರ ನನಗೆ ಕೇಳಿಸಿತು. ಅಷ್ಟು ಹೆಚ್ಚು ಶಬ್ದವನ್ನು ನಾನು ಕೇಳಿಯೇ ಇರಲಿಲ್ಲ. ಏನೋ! ಯಾವ ಭಯಸೂಚಕವೋ ಎಂದು ತಿಳಿಯಲಾರದವನಾಗಿದ್ದೆ. ನಾನಿದ್ದ ಮನೆಯ ಬಯಲಲ್ಲಿ ರಕ್ತದಿಂದ ತೋಯ್ದ ಆಕಾರಕೆಟ್ಟ ಮನುಷ್ಯಾಕಾರದ ಮೂಟೆ ಇದ್ದುದನ್ನು ಕಂಡೆ. ಸಹಾಯಕ್ಕಾಗಿ ಜನರು ನನ್ನ ಕಡೆಗೆ ಕೂಗಿ ಓಡು ತ್ತಿದ್ದರು. ಎಲ್ಲೆಲ್ಲಿಯೂ ರೋದನಧ್ವನಿಯು ಕೇಳಿಬಂದು ಮನೆಯೆಲ್ಲವೂ ಶೂನ್ಯವಾಗಿತ್ತು. ಭೂತದಂತೆ ನಮ್ಮ ಮನೆಸೇವಕಳು ನನಗೆ ಆಗ ಕಂಡಳು. ಭಯಾನಕ ವ್ಯಕ್ತಿಯೊಂದು "ಅಯ್ಯೋ! ದೇವರೆ! ಅವನು ಚಿತ್ತವಿಭ್ರಮಣೆ ಯಿಂದ ಕಿಟಕಿಯಾಚೆ ತಳ್ಳಿಬಿಟ್ಟಿದ್ದಾನೆ" ಎಂದು ಕೂಗಿಕೊಂಡಳು. ಆಗ ನನಗೆ ಅರ್ಥವಾಯಿತು.

ಅಂದಿನಿಂದ ನಾನು, ಪ್ರಪಂಚದ ಪೆಟ್ಟಿಗೆಯಲ್ಲಿ ಆಟದಬೊಂಬೆಗಳು ಮಾತ್ರ ಅಡಗಿವೆಯೆಂದು ತಿಳಿದುಕೊಂಡಿದ್ದ ತಿಳಿವಳಿಕೆಯನ್ನು ತಿದ್ದಿಕೊಂಡೆ. ಪ್ರಪಂಚ ಭೂಪಟದಲ್ಲಿ ಮಾನವನಿಗೆ ಕಾಣುವುದು ಅವನ ಅತಿರೇಕದ ವಿಚಾರವೇ ಎಂದು, ನನಗೆ ಅನುಭವವಾಯಿತು. ಆನಂದ ಸುಖಗಳೆರಡು ಮಾತ್ರವೇ ಪ್ರಪಂಚದಲ್ಲಿ ತುಂಬಿಕೊಂಡಿರುವುದೆಂದು ತಿಳಿದಿದ್ದ ನನ್ನ ಅನು ಭವಕ್ಕೆ, ಅತಿಯಾಗಿ ದುಃಖವೂ ಬಾಧೆಯೂ ಹಿಂಸೆಯೂ ತುಂಬಿದೆಯೆಂದು ಗೊತ್ತಾಯಿತು.



# ಅವನೊಬ್ಬ ಕೈದಿ

ಅವನೊಬ್ಬ ಕೈದಿ. ಸೆರೆಮನೆಯ ವಾಸವನ್ನು ಒಂದು ಭಯಂಕರ ಆಪಾದನೆಗಾಗಿ ಅನುಭವಿಸಬೇಕಾಗಿತ್ತು. ಆಪಾದನೆಯು ರಾಜಕೀಯ ವಿಷಯತರವಾಗಿದ್ದು, ಅಪರಾಧಿಗೆ ಶಿಕ್ಷೆ ಕಠಿಣವಾಗಿ ವಿಧಿಸಿದ್ದರು. ಅಪರಾಧಿ ಎಂದು ಸೆರೆ ಹಿಡಿದಿದ್ದವರು ವಿಚಾರಣೆಗೆ ಗುರಿಪಡಿಸಿರಲಿಲ್ಲ, ಬದಲಾಗಿ ಗುಹ್ಯಾಂತರ ಕೋಣೆಯೊಂದರಲ್ಲಿ ಕೈಕಾಲು ಕಟ್ಟಿ ಆತನನ್ನು ಕೆಡವಿದ್ದರು ಕ್ರಿಮಿಕೀಟಗಳಿಗೆ ನೆಲೆಯಾಗಿದ್ದ ಸ್ಥಳವು ಕೈದಿಯ ವಾಸಸ್ಥಳವಾಗಿ ಅಧಿಕಾರಿಗಳು ನಿರ್ಮಿಸಿದ್ದರು. ಬೆಳಕು ಗಾಳಿಗೆ ಎಡೆಯಿಲ್ಲದ ಸ್ಥಳದಲ್ಲಿ ಸ್ವಾತಂತ್ರ್ಯ ಹೀನನಾದ ಕೈದಿಯು ಶಿಕ್ಷೆಗೆ ಒಳಗಾಗಿದ್ದನು. ಕೆಲವು ದಿನಗಳಲ್ಲಿ ಆತನ ಕೊರಳ ಭಾಗದಲ್ಲಿ ಬಾವೊಂದು ಕಾಣಿಸಿಕೊಂಡು ದೊಡ್ಡ ವ್ರಣವಾಗಿ ಆತನನ್ನು ಉಗ್ರ ಕಾಹಿಲೆಗೆ ಈಡುಮಾಡಿತ್ತು. ಕೈದಿಯ ಭಯಂಕರ ಸ್ಥಿತಿಗೆ ಮರುಗುವವರಾರೂ ಸೆರೆಮನೆಯಲ್ಲಿರಲಿಲ್ಲ.

ಸೆರೆಮನೆಯಲ್ಲಿ ಬಂಧಿತರನ್ನು ಕಾಲಕಾಲಕ್ಕೆ ನೋಡಿ ಹೋಗುತ್ತಿದ್ದವನೆಂದರೆ, ಸರ್ಕಾರದಿಂದ ಗೌರವಿಸಲ್ಪಟ್ಟ ವೃದ್ಧ ದಯಾಳು ಒಬ್ಬನೇ ಆಗಿದ್ದನು. ಅವನೊಬ್ಬ ಸಮಾಜ ಸುಧಾರಕ ಮತ್ತು ಉದಾರಿ, ಕೈದಿಗಳಿಗೆ ಒಟ್ಟಿನಲ್ಲಿ ಹಿತಚಿಂತಕನಾಗಿದ್ದನು. ಬಂದಿವಾಸಿಗಳೆಲ್ಲರೂ ಆತನನ್ನು ಬಲ್ಲವರಾಗಿದ್ದು ತಮ್ಮ ಕಷ್ಟ ಕೊರತೆಗಳನ್ನು ಹೇಳಿಕೊಂಡು ಹಲವಾರು ಸಲ ಸುಧಾರಿಸಿಕೊಳ್ಳುತ್ತಿದ್ದರು. ಬಂಧಿತರ ವಿಷಯದಲ್ಲಿ ದಯಾಳುವು ತೆಗೆದುಕೊಳ್ಳುತ್ತಿದ್ದ ಶ್ರದ್ಧೆ ಮತ್ತು ದಯೆಗಾಗಿ ಎಲ್ಲರೂ ಆತನನ್ನು ಗೌರವಿಸುತ್ತಿದ್ದರು. ನಿಸ್ವಾರ್ಥಸೇವೆಗೆ ಮನ್ನಣೆಯನ್ನಿತ್ತಿದ್ದರು. ಒಂದು ದಿನ ಪ್ರತ್ಯೇಕ ಕೈದಿಗಳನ್ನು ದಯಾಳುವು ವಿಚಾರಿಸುತ್ತಿರುವಾಗ್ಯೆ ರಾಜಕೀಯ ಬಂಧಿತನೂ ಗೋಚರನಾದನು. ಆತ ಪಡುತ್ತಿದ್ದ ಕಷ್ಟ ನರಳುವಿಕೆಗೆ ದಯಾಳುವು ಮರುಗಿ ಆತನ ಉತ್ಕಟಸ್ಥಿತಿಗೆ ರೋಗಚಿಕಿತ್ಸೆಗಾಗಿ ಸೆರೆಮನೆಯ ಅಧಿಕಾರಿಗಳಲ್ಲಿ ಬೇಡಿದನು. ಉಗ್ರಕಾಹಿಲೆಯಲ್ಲಿ ನಿರ್ಲಕ್ಷ್ಯ

ದಿಂದ ಪ್ರತ್ಯೇಕ ಕೊಠಡಿಯಲ್ಲಿ ಇಟ್ಟಿರುವುದಕ್ಕೆ ಕಾರಣ ತಿಳಿಯದೆ ಅಧಿಕಾರಿಗಳನ್ನು ಕೇಳಲು ಮೇಲಣ ಆಜ್ಞೆಯಂತೆ ತಾವು ನಡೆದಿರುವುದಾಗಿ ಉತ್ತರವಿತ್ತರಲ್ಲದೆ ಈ ವಿಷಯದಲ್ಲಿ ತಾವು ಮತ್ತೇನೂ ಹೇಳಲಾರರೆಂದು ನಡೆದುಬಿಟ್ಟರು.

ವೃದ್ಧ ದಯಾಳುವು ಈಗ ಗೊಂದಲಕ್ಕೆ ಸಿಕ್ಕಿಬಿದ್ದನು. ಬಂಧಿತನ ಉಗ್ರಕಾಹಿಲೆ, ಅಧಿಕಾರಿಗಳ ಅಲಕ್ಷ್ಯ ಈವೆರಡರಲ್ಲಿ ಸಿಕ್ಕಿ ಉಪಾಯ ಕಾಣದೆ ಹೋದನು. ಬಂಧಿತನನ್ನು ಹೇಗಾದರೂ ಉದ್ಧರಿಸಬೇಕೆಂಬುದು ಆತನ ಯೋಚನೆಯಾಯಿತು. ಸುಲಿಗೆ, ದರೋಡೆ ಮುಂತಾದ ಹೇಯ ಕೃತ್ಯವಮಾಡಿದವರು ಸೆರೆಮನೆಯಲ್ಲಿ ಉತ್ತಮ ಸ್ಥಿತಿಯಲ್ಲಿ ಜೀವಿಸುತ್ತಿರಲು ರಾಜಕೀಯ ಅಪಾದಿತನಿಗೆ ಈ ತರಹ ಶಿಕ್ಷೆ ಏನೆಂದು ತಿಳಿಯದೆ ಆತನಿಗೆ ಆಶ್ಚರ್ಯವಾಯಿತು. ಕೈದಿಯನ್ನು ಭೇಟಿಮಾಡಿ ಕೂಲಂಕುಷ ವಿಚಾರಿಸಿ ಆತ ನಿರ್ದೋಷಿ ಮತ್ತು ಗುಪ್ತಚಾರರ ಹೇಳಿಕೆಯಂತೆ ಕಠಿಣಶಿಕ್ಷೆಗೆ ಒಳಪಟ್ಟಿರುವೆನೆಂದು ತಿಳಿದುಕೊಂಡು ಬಿಡುಗಡೆಗೆ ಯತ್ನ ನಡೆಸಿದನು.

ಬಂಧಿತನು ಆರು ವರ್ಷಗಳ ಹಿಂದೆ ಪಿತೂರಿ ಕೇಸಿನಲ್ಲಿ ಸೆರೆಸಿಕ್ಕಿ ನರಳುತ್ತಿದ್ದನು. ಸೆರೆಯು ಎಂದಿಗೆ ಮುಗಿದೀತೆಂಬುದರ ನಿಶ್ಚಯವು ಅವನಿಗಿರಲಿಲ್ಲ. ಉಳಿದ ಜತೆಗಾರ ಒಳಸಂಚುಗಾರರು ಪ್ರಮಾಣಗಳನ್ನು ಸಲ್ಲಿಸಿ ಬಿಡಿಸಿಕೊಂಡಿದ್ದರು. ಪ್ರಮಾಣವಿರದ್ದರಿಂದ ಆತ ಸೆರೆಮನೆಯಲ್ಲಿಯೇ ಉಳಿಯಬೇಕಾಯಿತು. ವಿಪ್ಲವಕಾರರನ್ನು ಪ್ರೀತಿಸುವವರೂ ಕ್ರಾಂತಿಕಾರಿಗಳಾಗಿರಲೇಬೇಕೆಂಬ ಸರ್ಕಾರದ ಯೋಜನೆಯಂತೆ ಗುಪ್ತಚಾರರು ಅವರನ್ನು ಹಿಂಬಾಲಿಸಿದ್ದರು. ಇದೀಗ ಬಂಧಿತನ ಕರುಣವೀಣೆಯ ಧ್ವನಿಯಾಗಿತ್ತು. ಹೆಚ್ಚು ಕಠೋರವಾದ ಮಾನಸಿಕ ಶಾರೀರಕ ಹಿಂಸೆಯನ್ನು ಅನುಭವಿಸುತ್ತಾ ದಿನವಹೀ ಕೋಣೆಯಲ್ಲಿ ಜೋತುಬಿದ್ದಿದ್ದ. ಕೆಲವು ವೇಳೆ ಉತ್ತೇಜಿತನಾಗಿ ಎದ್ದು ಅಲ್ಲಿಂದಿಲ್ಲಿಗೆ ಕೊಂಚ ತಿರುಗಾಡಿ ಮತ್ತೆ ಹಾಸಿಗೆಯ ಮೇಲೆ ನಿಸ್ತೇಜಿತನಾಗಿ ಮಲಗುವುದೇ ಆತನ ಕ್ರಮವಾಗಿತ್ತು. ಬಂಧಿತ ಮತ್ತು ವೃದ್ಧ ದಯಾಳುವಿನ ಸ್ನೇಹಪೂರ್ವಕ ವಿಷಯವು ಜನರಲ್ಲಿ ಸಾಮಾನ್ಯವಾಯಿತು. ದಯಾಳುವಿನ ಹಿತದ ಗೆಳೆತನದ ಮಧುರ ನುಡಿಗಳು ಬಂಧಿತನನ್ನು ಅನಂದಗೊಳಿಸುತ್ತಿದ್ದವು. ಆತನ ಕೊರಳವ್ರಣವು

ಕ್ರಮೇಣ ಮಾಯವಾಗುತ್ತಾ ಬಂದಿತು. ದಯಾಳುವು ಬಿಡುಗಡೆಗಾಗಿ ಪ್ರಯತ್ನವನ್ನು ನಡಿಸುತ್ತಲಿದ್ದು ಅನೇಕ ಸಲ ವಿಫಲನಾಗಿ ಕೊನೆಗೆ ಜನರ ಅಪಹಾಸ್ಯಕ್ಕೆ ಈಡಾಗಿದ್ದನು. ತಿರಸ್ಕಾರ ಮತ್ತು ಅವಹೇಳನಕ್ಕೆ ಗುರಿಯಾದ ದಯಾಳುವು ತನ್ನ ಕೆಲಸವು ಮರಳುಗಾಡಿನಲ್ಲಿ ಮರೀಚಿಕೆಯನ್ನು ಹಿಂಬಾಲಿಸುವ ರೂಪವಲ್ಲದೆಯೆಂದು ತಿಳಿದುಕೊಂಡು, ಎಡರಿಗೆ ಹೆದರದೆ ಪ್ರಯತ್ನಿಸುತ್ತಿದ್ದನು.

ದಯಾಳುವು ಬಂಧಿತನೊಡನೆ ಪ್ರಸಿದ್ಧನಾದಮೇಲೆ, ಜನರ ಪ್ರಮುಖ ವಕೀಲನೊಬ್ಬನು ಅವನನ್ನು ಭೇಟಿಮಾಡಿದನು. ತಾನು ಬಂಧಿತನ ವಿಚಾರವಲ್ಲಿ ಅಲ್ಪ ತಿಳಿದಿರುವೆನೆಂದೂ, ಬಿಡುಗಡೆಗೆ ಪ್ರಯತ್ನಮಾಡುವೆನೆಂದೂ, ಈ ಸಾಧನಕ್ಕೆ ಒಂದು ಸಾವಿರ ರೂಪಾಯಿ ಹಣ ಅಗತ್ಯವೆಂದು ತಿಳಿಸಿ ಒಂದು ಕರಾರಿಗೆ ದಯಾಳುವು ಒಪ್ಪಿದಾದರೆ ತಾನು ಕಾರ್ಯ ಜಯಿಸುವೆನೆಂದು ಹೇಳಿದನು. ಬಿಡುಗಡೆಯ ಕಾರ್ಯದಲ್ಲಿ ಯಾರಿಂದ, ಯಾವ ರೀತಿ ಎಂಬೀ ವಿಷಯವನ್ನು, ಕಾರ್ಯ ಸಾಧಿಸದಿದ್ದಲ್ಲಿ ಕೊಟ್ಟ ಹಣವನ್ನು ಹಿಂದಕ್ಕೆ ಕೇಳದಂತೆ ಒಪ್ಪುವುದಾದರೆ ಯತ್ನಿಸುವೆನೆಂದು ಸ್ಪಷ್ಟಪಡಿಸಿದನು. ಬಂಧಿತನ ಬಿಡುಗಡೆಗೆ ಅದ್ಯಂತ ಯತ್ನನಡೆಸಿ ಜಯಿಸದ ದಯಾಳುವು ಚಿಂತಿಸದೆ ವಕೀಲನ ಮಾತಿನಂತೆ ಒಪ್ಪಿ ಹಣ ಸಲ್ಲಿಸಿ ಕಾರ್ಯತತ್ಪರನಾಗುವಂತೆ ಬೇಡಿಕೊಂಡನು.

ಯಥಾರೀತಿಯಲ್ಲಿ ಬಂಧಿತನ ಸಂದರ್ಶನವು ದಯಾಳುವಿನಿಂದ ನಡೆಯುತ್ತಲೇ ಇತ್ತು. ವಕೀಲನ ಪ್ರಯತ್ನದಲ್ಲಿ ನಂಬುಗೆಯಿಟ್ಟ ದಯಾಳುವು ಯಾವುದೊಂದು ತಿಳಿಯದೆ ಚಿಂತಿಸುತ್ತಿದ್ದನು. ಅನಾಥಬಂಧು ಒಬ್ಬನನ್ನು ಪೇಚಿನಿಂದ ಬಿಡಿಸಲಾರದೆ ಹೋದೆನೆಂದು ವ್ಯಸನಗೊಂಡು ಬಂಧಿತನ ಅಂತ್ಯವು ಬಿಡುಗಡೆಯಲ್ಲಿಲ್ಲ ಮರಣದಲ್ಲಿಯೇ ಮುಗಿಯುವುದೆಂದು ತಿಳಿದು ಕೊರಗುತ್ತಲಿದ್ದು, ಅಕಸ್ಮಿಕವಾಗಿ ಪರಿಚಿತ ವಕೀಲನಿಂದ ಬಂದ ಪತ್ರದಿಂದ ದೂರದಾಸೆಯೊಂದರಲ್ಲಿ ಮನಸ್ಸಿಟ್ಟನು.

ಇನ್ನೂ ಬಂಧಿತನ ಬಿಡುಗಡೆಯಲ್ಲಿ ಇಚ್ಛೆಯಿದ್ದಲ್ಲಿ ಮುಂದಿನ ಕಾರ್ಯ ಸಾಗುವಿಕೆಗೆ ಐನೂರು ರೂಪಾಯಿ ಹಣವನ್ನು ಕೂಡಲೇ ಸಲ್ಲಿಸಿ. ಅಲ್ಲದೆ,

ಬಂಧಿತನ ಬಿಡುಗಡೆಯು ನಿಶ್ಚಯವೆಂದು ತಿಳಿಯಿರಿ.” ವಕೀಲನ ಪತ್ರದ ಅಭಿಪ್ರಾಯವನ್ನು ತಿಳಿದ ದಯಾಳುವು, ವಕೀಲನೊಬ್ಬ ಕ್ರೂರಿಯೆಂದು ಕೊಂಡು; ಅನಾಥಬಂಧುವಿನ ಬಿಡುಗಡೆಯ ವಿಷಯದಲ್ಲಿ ಅನಾದರಣೆ ತೋರುತ್ತಿರುವನೆಂದು “ತನ್ನಿಂದ ಏನೂ ಮುಂದೆ ಸಹಾಯ ದೊರೆಯಲಾರ ದೆಂದು ತಿಳಿಸಿ ಹಿಂದಿನ ವ್ಯವಹಾರದಿಂದ ಹೊಸದೊಂದು ಪಾಠ ಕಲಿತಂತಾಯಿ ತೆಂದು ಮತ್ತು ಹಿಂದಿನ ಚಮತ್ಕೃತಿಯು ಮುಂದೆ ತನ್ನಲ್ಲಿ ಸಾಗದೆಂದು” ಪತ್ರದ ಮೂಲಕ ವಕೀಲನಿಗೆ ಮುಟ್ಟಿಸಲು, ಪ್ರತಿಯಾಗಿ ವಿರಸಪತ್ರ ಒಂದನ್ನು ಸಿದ್ಧಮಾಡಿ ಸ್ವತಃ ಮುಟ್ಟಿಸಲು ಆತನನ್ನು ಕಾಣುವುದಕ್ಕೆ ಹೊರಟನು.

ವಕೀಲನನ್ನು ಕಾಣಲು ದಯಾಳುವು ಸುಮಾರು ಮೂರು ಮೈಲಿ ನಡೆಯಬೇಕಾಗಿತ್ತು. ದೊಡ್ಡ ಚಿಂತೆಯೊಂದಿಗೆ ದಾರಿ ನಡೆದು ದೂರ ಸರಿಯ ಬೇಕಾಗಿತ್ತು. ವಕೀಲನ ಹಣ ಸುಲಿಗೆಯ ಪ್ರಕರಣ ಕಂಡ ದಯಾಳುವು ಆತ ನಡೆಸುತ್ತಿದ್ದ ದ್ರೋಹಚಿಂತನೆಗೆ ಕೋಪಗೊಂಡು ಬಂಧಿತನ ಕರುಣ ವೀಣೆಯ ಧ್ವನಿಗೆ ಮನನೊಂದು ತಾನು ಈಗ ತುಳಿಯುತ್ತಿರುವ ಹಾದಿಯು ತೀರ ಅವಿವೇಕವಾದುದೆಂದು ಆಲೋಚಿಸಿದನು. ತಾನು ಸಿದ್ಧಮಾಡಿದ್ದ ಪತ್ರವನ್ನು ಹರಿದುಹಾಕಿ ಇದಾದರೂ ಕೊನೆಯ ಪ್ರಯತ್ನ ನೋಡಿಯೇ ಬಿಡುವುದೆಂದು ನಿಶ್ಚಯಿಸಿ ಹಣ ಪಾವತಿಮಾಡುವ ಬಗ್ಗೆ ಯೋಚಿಸಿ ಉಪಾಯ ಕಂಡುಕೊಂಡನು. “ತಮ್ಮ ಅಭಿಪ್ರಾಯದಂತೆ ಪ್ರಯಾಸದಿಂದ ಈ ಐನೂರು ರೂಪಾಯಿಗಳನ್ನು ಸಂಗ್ರಹಿಸಿ ಬ್ಯಾಂಕು ಹುಂಡಿ ಮೂಲಕ ತಮಗೆ ತಲಪಿಸಿರುವೆನು. ಸ್ಥಿತಿವಂತನಲ್ಲದ ನಾನು ಈ ಹಣವನ್ನು ಹೇಗೆ ಸಲ್ಲಿಸಿರುವೆನೆಂಬುದನ್ನು ನೀವು ಯೋಚಿಸಬೇಕು; ಕೊನೆಯದಾಗಿ ಸಂದ ಹಣವನ್ನು ಯೋಗ್ಯಮಾರ್ಗದಲ್ಲಿ ಉಪಯೋಗಿಸಿ ಬಂಧಿತನ ಬಿಡುಗಡೆಗೆ ಯತ್ನಿಸಬೇಕಾಗಿ ಬೇಡಿ, ತನ್ನನ್ನು ಈ ಕಾರ್ಯದಲ್ಲಿ ಯಾವುದೇ ರೀತಿ ಯಲ್ಲಿ ಮೋಸಪಡಿಸಿದ್ದಲ್ಲಿ ಜೀವಮಾನದಲ್ಲಿ ಒಂದು ದಿನ ನಿಮ್ಮ ನಡತೆಗೆ ಪಶ್ಚಾತ್ತಾಪಪಡುವಿರಿ” ಎಂಬರ್ಥದ ಪತ್ರವನ್ನು ಮುಟ್ಟಿಸಿದನು.

ಒಂದು ಸಂಧ್ಯಾಸಮೀರಣದಲ್ಲಿ ದಯಾಳುವು ಸಂಚಾರಕ್ಕಾಗಿ ಹೊರ ಹೊರಟು ಜನರ ಮತ್ತು ಅವಹೇಳನಗಾರರಿಂದ ದೂರವಾಗಿ ಸ್ವಲ್ಪಹೊತ್ತು

ಮನಶ್ಶಾಂತಿ ಪಡೆಯಲು ಸಾರ್ವಜನಿಕ ಕ್ರೀಡಾವನದಲ್ಲಿ ಅಡ್ಡಾಡುತ್ತಿದ್ದನು. ಆತನ ಅಚ್ಚುಮೆಚ್ಚಿನ ಧಾರ್ಮಿಕ ಗ್ರಂಥವು ಕೈಯಲ್ಲಿತ್ತು. ಹತ್ತಿರದಲ್ಲಿದ್ದ ಪುಷ್ಪವಾಟಿಯ ಪಕ್ಕದಲ್ಲಿ ವಿಶ್ರಮಿಸಲು ಕುಳಿತುಕೊಂಡು ಯಾವುದೋ ಮನದಲ್ಲಿ ಉಳಿದಿದ್ದ ಚಿಂತೆಯೊಂದಿಗೆ ಗ್ರಂಥ ಪುಟಗಳನ್ನು ತಿರುವುಹಾಕುತ್ತಿದ್ದನು. ಮುಗಿಲಿನಲ್ಲಿ ಕಿರಣಗಳು ಕಾಣಿಸಿಕೊಂಡಾಗ್ಯೂ ಸ್ಥಳ ಬಿಟ್ಟೇಳದೆ ಆಲೋಚನೆಯಲ್ಲಿ ಮಗ್ನನಾಗಿದ್ದನು. ಮುಸುಕು ಮೋಡವು ಆತನ ಮನಸ್ಸನ್ನು ಬಳಿಸಿತ್ತು. ತೇಜಕಾಂತಿಯು ಮಾಯವಾಗಿತ್ತು. ಮನಸ್ಸು ಭಗ್ನವಾಗಿ ಶಾಂತತೆಯು ದೂರವಾಗಿತ್ತು. ಕ್ರೀಡಾವನದಿಂದ ಜನರೆಲ್ಲ ಸರಿದಮೇಲೆ ಹೊರಡಲನುವಾಗಿ ಹೆಜ್ಜೆ ಮುಂದಿಟ್ಟನು. ಸ್ವಲ್ಪ ದೂರದಲ್ಲಿ ಅತಿ ಪ್ರಯಾಸದಿಂದ ಕುಂಟುತ್ತಾ ಹೆಜ್ಜೆ ಹೆಜ್ಜೆಗೂ ಉಸಿರಿಡುತ್ತಾ ವ್ಯಕ್ತಿಯೊಬ್ಬನು ಅರಮರೆಯಾಗಿ ಕಾಣಿಸಿಕೊಂಡನು. ದಯಾಳುವನ್ನು ಸಮೀಪಿಸಿ ಅಪರಿಮಿತ ಆನಂದದಲ್ಲಿ ಬಾಗಿ ಆತನನ್ನು ತಬ್ಬಿಕೊಂಡು "ಸ್ವತಂತ್ರಪುರುಷನಾಗಿ ಬಂಧನದಿಂದ ಬಿಡುಗಡೆ ಹೊಂದಿದೆನೆಂದು" ಉಸುರಿದನು. ಪ್ರಕೃತಿಯ ಮಡಲಲ್ಲಿ – ಪ್ರೇಮಲೀಲೆಯಲ್ಲಿ – ನಭೋಮಂಡಲದ ಕಿರುತಾರೆಯ ಎಡೆಯಲ್ಲಿ ಬಂಧಿತನು ದಯಾಳುವಿನೊಡನೆ ಆನಂದಪಡೆದನು.

ದಯಾಳುವಿನ ಪತ್ರ ಮುಟ್ಟಿದೊಡನೆಯೆ ವಕೀಲನಿಗೆ ಚುರುಕೆನಿಸಿತು. ಬಂಧಿತನ ಬಿಡುಗಡೆಗೆ ಯತ್ನ ನಡೆಸಿದ ವಕೀಲನು, ದಯಾಳುವಿಗೆ ವಿಚಾರ ಕುರಿತು ಬರೆಯುತ್ತಾ "ರಾಜಕೀಯ ಕೈದಿಗಳ ವಿಚಾರದಲ್ಲಿ ನಮ್ಮ ಜನರ ನಡತೆಯನ್ನು ಇಲ್ಲಿ ವಿವರಿಸುತ್ತಿಲ್ಲ. ಬಿಡುಗಡೆಗೆ ಹಲವು ಪ್ರಯತ್ನಗಳಿವೆ. ಪರಿದಾನವು ಅನೇಕ ಸಲ ಸಫಲವಾಗುತ್ತದೆ. ಅವನ್ನು ಇಲ್ಲಿ ತಿಳಿಸುವುದಾಗಲೀ ಬರೆಯುವುದಾಗಲಿ ಸಾಧ್ಯವಿಲ್ಲ. ಮುಂದೆ ನಾವಿಬ್ಬರೂ ಸಂಧಿಸಿದಾಗ ಬಿಡುಗಡೆ ಹೇಗೆ? ಯಾವ ರೀತಿ ಎಂಬೀ ವಿಷಯವನ್ನು ತಿಳಿಸುವೆನು" ಎಂಬುದಾಗಿ ಬರೆದಿದ್ದನು. ಆದರೆ ವಕೀಲನಿಗೆ ದಯಾಳುವನ್ನು ಸಂಧಿಸುವ ಸುಯೋಗ ಮಾತ್ರ ದೊರಕಲಿಲ್ಲ. ದಯಾಳುವು ಬಂಧಿತನ ಬಿಡುಗಡೆಯ ನಂತರ ತೀರಿಹೋಗಿದ್ದನು.

# ಕೆಂಪು ಮೆಟ್ಟು

ಮಹಮುದ್ದೀಯ ರಾಜ್ಯದಲ್ಲಿ ನಡೆದ ಒಂದು ಕಥೆಯಿದು. ಪತಿಯೆನಿಸಿದವ ಹೆಂಡತಿಯ ಕೋಣೆಯನ್ನು ಪ್ರವೇಶಿಸುವ ಮೊದಲು ಹೊಸ್ತಿಲ ಬಳಿ ನೋಡುವ ಪದ್ಧತಿಯಿತ್ತು. ಅಲ್ಲಿ ಕೆಂಪು ಮೆಟ್ಟು ಕಂಡರೆ, ಹೆಂಡತಿಯು ಗೆಳತಿಯೊಂದಿಗೆ ಮಾತನಾಡುತ್ತಿದ್ದಾಳೆಂದು ತಿಳಿದು, ಉಳಿಯುವ ಸೂಚನೆ. ಈ ಕಥೆಯೂ ಕೆಂಪು ಮೆಟ್ಟಿನದೇ ಆಗಿದೆ.

ಸಾದಕ್ ಆಲಿ ಎಂಬ ಮಧ್ಯವಯಸ್ಸಿನ ಆಳಿಗೆ ಜಾರಿಡಾ ಎಂಬ ಪತ್ನಿ ಇದ್ದಳು. ಜಾರಿಡಾ ಅನುಪಮ ಸುಂದರಿ. ಇಷಾಬಿಲ್ ಎಂಬ ಅಕ್ಕಸಾಲಿಗನ ಮಗಳು. ಅವಳು ಬಾಲ್ಯದಲ್ಲಿಯೇ ಪೂರ್ಣಹೆಂಗಸಿನ ಛಾಯೆ ತಳೆದು ಸುಂದರಿಯೆನಿಸಿದ್ದಳು. ಬಾಲ್ಯದಿಂದಲೇ ಸ್ವೇಚ್ಛೆಯಿಂದ ಬೆಳೆದ ಜಾರಿಡಾ ಕಣ್ಣುಗಳು, ಕೆನ್ನೆಗಳು, ಚೆಲುವಿನ ಮೊಗವನ್ನೂ ಪ್ರೀತಿಯನ್ನೂ ಎತ್ತಿ ತೋರುತ್ತಿತ್ತು.

ಜಾರಿಡಾ ಹದಿನಾಲ್ಕು ವಯಸ್ಸಿಗೆ ಬೆಳೆದು ನಿಂತ ಕನ್ಯೆಯಾದಳು. ಮಹಮ್ಮದೀಯ ಮತಪದ್ಧತಿಯಂತೆ ಮೊಗ ಮುಚ್ಚಿಕೊಂಡು ಮದುವೆಗಾಗಿ ನಿಂತವರ ಪೈಕಿ ಅವಳೂ ಒಬ್ಬಳಾದಳು. ಅವಳ ತಂದೆ ಇಷಾಬಿಲ್, ವರನನ್ನು ಹುಡುಕುವ ಸಾಹಸದಲ್ಲಿದ್ದನು. ಯಾರಿಂದ ಹೆಚ್ಚು ಹಣ ತನಗೆ ದೊರೆಯುವುದೋ ಅವರಿಗೆ ಜಾರಿಡಾವನ್ನು ಒಪ್ಪಿಸಲು ಅವನು ಸಿದ್ಧನಾಗಿದ್ದ.

ಜಾರಿಡಾ ರೂಪಲಾವಣ್ಯಕ್ಕೆ ಇಷಾಬಿಲ್ ಕೇಳುತ್ತಿದ್ದ ಹೆಚ್ಚು ಮೌಲ್ಯ ನ್ಯಾಯವಾಗಿಯೇ ಇತ್ತು. ಜಾರಿಡಾ 'ಡಾರಬುಕಾ' ಎಂಬ ವಾದನದೊಂದಿಗೆ ಮನೋಹರವಾಗಿ ಹಾಡುತ್ತಿದ್ದಳು. ಅಲ್ಲದೇ ಇಡೀ ಕೊರಾನನ್ನು ಮೊದಲಿನಿಂದ ಕೊನೆಯವರೆಗೆ ತಪ್ಪದೆ ಒಪ್ಪಿಸುತ್ತಿದ್ದಳು. ಕೊರಾನನ್ನು ಒಪ್ಪಿಸುತ್ತಿದ್ದುದು ಮಹತ್ತಾದ ಗುಣವಾಗಿದ್ದಿತು. ಇಷ್ಟೇ ಅಲ್ಲ, ಜಾಣತನ

ದಿಂದ ಅವಳು ಬೆರಳುಗಳನ್ನಾಡಿಸಿ ಹೆಣೆಯುತ್ತಿದ್ದ ವಸ್ತ್ರಗಳನ್ನು ಕಂಡು ಜನರು ಆಕೆಯ ಚತುರತೆಗೆ ಅಸೂಯೆಪಡುತ್ತಿದ್ದರು. ಇಷಾಬಿಲ್ ಈ ಗುಣ ಗಳನ್ನೆಲ್ಲಾ ವರ್ಣಿಸಿ ಹೆಚ್ಚು ಮೌಲ್ಯ ಕೇಳುತ್ತಿದ್ದ.

ಜಾರಿಡಾವನ್ನು ಮದುವೆಯಾಗಲು ಅನೇಕ ಶ್ರೀಮಂತರು ಮುಂದೆ ಬಂದರು. ಇಷಾಬಿಲ್ ಕೇಳುತ್ತಿದ್ದ ಹಣವನ್ನು ಕೊಡಲು ಯಾರೂ ಸಿದ್ಧ ವಾಗಿರಲಿಲ್ಲ. ಈ ಚತುರೆಯನ್ನು ಮದುವೆಮಾಡಿಕೊಳ್ಳಬೇಕೆಂಬ ಆಸೆ ಯಿಂದ ಸಾದಕ್ ಆಲಿಯೆಂಬ ತರುಣ ಕಟ್ಟಾಳು, ಇಷಾಬಿಲ್ ಮುಂದೆ ಬಂದ. ಹೆಚ್ಚು ಹಣ ಸುರಿಯಲು ಅವನು ಬಂದುದನ್ನು ಕಂಡ ಇಷಾಬಿಲ್, ಜಾರಿಡಾವನ್ನು ಒಪ್ಪಿಸಲು ಮಾತುಕೊಟ್ಟ. ಸಾದಕ್ ಆಲಿ ಉಬ್ಬಿ ಕೊಬ್ಬಿ ದವನಾಗಿದ್ದಾನೆ, ಅಲ್ಲದೆ ಹೆಚ್ಚು ಹಣ ಸುರಿಯಲು ಸಿದ್ಧನಾಗಿದ್ದಾನೆ! ಇವನೇ ಸುಂದರ ಸ್ತ್ರೀಯನ್ನು ಸುಲಭವಾಗಿ ವಶಮಾಡಿಕೊಳ್ಳಬಲ್ಲ ಆಳೆಂದು, ಇಷಾಬಿಲ್ ನಿರ್ಧರಿಸಿದ. ಜಾರಿಡಾ ಅಭಿಪ್ರಾಯವನ್ನು ತಾನು ಕೇಳ ಬೇಕಾದುದಿಲ್ಲವೆಂದು ತೀರ್ಮಾನಿಸಿಬಿಟ್ಟ.

ಹೀಗಾಗಿ ಜಾರಿಡಾ ತನಗೆ ಒಪ್ಪಿಗೆಯಿಲ್ಲದಿದ್ದರೂ ಸಾದಕ್ ಆಲಿಯ ಕೈಹಿಡಿಯಲು ಒಪ್ಪಬೇಕಾಯಿತು. ಇಷಾಬಿಲ್ ಅಂಗಡಿಗೆ ಸಾದಕ್ ಆಲಿ ಬರುತ್ತಿದ್ದುದು, ತನ್ನನ್ನು ನೋಡುತ್ತಿದ್ದುದು, ತನ್ನ ಕೈಯಿಂದಲೇ ಅವನು ಚಹಾ ಕುಡಿಯುತ್ತಿದ್ದುದು ಎಲ್ಲವನ್ನೂ ಜಾರಿಡಾ ನೆನಪಿಗೆ ತಂದುಕೊಂಡಳು. ಆದರೆ ಅವಳ ಮನಸ್ಸು ಸಾದಕ್ ಆಲಿಯ ಕಡೆಗಿರಲಿಲ್ಲ. ಮನಸ್ಸಿಲ್ಲದೆಯೇ ಇವನನ್ನು ಮದುವೆಮಾಡಿಕೊಳ್ಳಬೇಕಲ್ಲಾ ಎಂದು ಕೊರಗುತ್ತಿದ್ದಳು.

ಸಾದಕ್ ಆಲಿ ಉಬ್ಬಿದವನೇ ಸರಿ. ಮಧ್ಯವಯಸ್ಸಿನವ. ನೋಡು ವುದಕ್ಕೆ ಕುರೂಪಿ. ಜಾರಿಡಾ ತನ್ನ ಮನಸ್ಸಿಗೆ ಒಪ್ಪಿದ ಚಿಗುರಿನ ತೆನೆ ಯಂತಹ ಯೌವನಸ್ಥನನ್ನು ಸದಾ ನೆನೆಯುತ್ತಿದ್ದಳು. ಒಂದು ರಾತ್ರಿ ಇಷಾ ಬಿಲ್, ಜಾರಿಡಾವನ್ನು ಹತ್ತಿರಕ್ಕೆ ಕರೆದು “ನೀನು ಮದುವೆಯ ವಯಸ್ಸಿಗೆ ಬಂದಿರುವೆ. ಸಾದಕ್ ಆಲಿ ಶ್ರೀಮಂತ. ಅವನ ಕೈಹಿಡಿದು ಸುಖವಾಗಿ ಬಾಳು. ಸಿದ್ಧಳಾಗು” ಎಂದು ಹೇಳಿದ. ತಂದೆಯ ಮಾತುಗಳನ್ನು ಕೇಳಿ ಜಾರಿಡಾ ಬೆಚ್ಚಿಬಿದ್ದು “ಅಪ್ಪಾ, ಮದುವೆಯ ಮಾತು ಬೇಡ. ನಾನು ಅವನನ್ನು ಮದುವೆಯಾಗಲಾರೆ” ಎಂದಳು.

ಇಷಾಬಿಲ್ ಗಂಟುಮೋರೆ ಮಾಡಿಕೊಂಡು "ಏನು! ಸಾದಕ್ ಆಲಿ ಗಿಂತ ಯಾರು ಹೆಚ್ಚು ಹಣ ಸುರಿಯುವವರಿದ್ದಾರೆ. ಅವನಂತಹ ಶ್ರೀಮಂತ, ಯೋಗ್ಯ ಬಲಶಾಲಿ ಯಾವನಿರುವನು? ನಿನ್ನನ್ನು ರಕ್ಷಿಸಲು ತಕ್ಕವನಾಗಿ ದ್ದಾನೆ" ಎಂದು ಸಮಾಧಾನ ಹೇಳಿದ. "ಅಪ್ಪಾ! ನಾನು ಅವನನ್ನು ಮದುವೆಯಾಗಲಾರೆ. ಮದುವೆಯಾಗದೆ ಇನ್ನೂ ಸ್ವಲ್ಪ ದಿನಗಳವರೆಗೆ ಇರಬೇಕೆಂಬ ಆಸೆಯಿದೆ. ಕೆಲವು ದಿನಗಳ ಮಟ್ಟಿಗಾದರೂ ಗೆಳತಿಯ ರೊಂದಿಗೆ ಇರಲು ಅವಕಾಶಕೊಡಪ್ಪಾ" ಎಂದು ಜಾರಿಡಾ ಅಂಗಲಾಚಿದಳು. ಕೋಪದಿಂದ ಕೈಯೆತ್ತಿ ಅಪ್ಪಳಿಸುವವನಂತೆ ಕೂಗಾಡುತ್ತಾ ಇಷಾಬಿಲ್ "ಮಗಳೆನಿಸಿದವಳು, ತಂದೆಯ ಮಾತನ್ನು ಕೇಳುವುದು ಧರ್ಮ. ನಾನು ಹೇಳುವುದನ್ನು ನೀನು ಕೇಳಲೇಬೇಕು, ಒಪ್ಪಲೇಬೇಕು. ಹೀಗೆ ಹಟ ಮಾಡಿವರೆ, ಬಿಗಿತ ಬಿಗಿಯಲೇಬೇಕಾಗುವುದು! ಮದುವೆಯಾಗಲು ಸಿದ್ಧ ಳಾಗು" ಎಂದು ಆಜ್ಞೆ ಮಾಡಿದ.

ನಿರುಪಾಯಳಾದ ಮುಗುದೆ ಜಾರಿಡಾ, ತಲೆತಗ್ಗಿಸಿ ಕಣ್ಣೀರಿಡು ತ್ತಿದ್ದಳು. ಇಷಾಬಿಲ್ ಎಂದೂ ಜಾರಿಡಾವನ್ನು ಇಷ್ಟು ಬಲವಂತಪಡಿಸಿರ ಲಿಲ್ಲ. ಸ್ವೇಚ್ಛೆಯಿಂದಲೇ ಬೆಳೆದು ನಿಂತವಳಾಗಿದ್ದಳು. ಈಗ ತಂದೆಯ ಮಾತನ್ನು ತಾನು ಮೀರಲು ಸಾಧ್ಯವಿಲ್ಲವೆಂದು ಯೋಚಿಸುತ್ತಾ, ಭೂತದವ ನಂತಿದ್ದ ಸಾದಕ್ ಆಲಿಯನ್ನು ಮದುವೆಯಾಗಬೇಕೆಂದು ನೆನೆದಾಗ ಗಡ ಗಡನೆ ನಡುಗುತ್ತಿದ್ದಳು.

ಮಗಳು ಹಾದಿಗೆ ಬಂದಳೆಂದು ಇಷಾಬಿಲ್ ಜಾರಿಡಾವನ್ನು ಹಿಡಿದೆತ್ತಿ ಅವಳ ಮುಂದಲೆಯನ್ನು ಸವರುತ್ತಾ "ನೀನು ನಿಜವಾಗಿಯೂ ನಮ್ರಳಾದ ಮಗಳೇ ಸರಿ. ನೀನು ಮದುವೆಗೆ ಸಿದ್ಧಳಾಗಿರುವ ವಿಚಾರವನ್ನು ಸಾದಕ್ ಆಲಿಗೆ ತಿಳಿಸಿಬರುವೆ" ಎಂದು ಹೇಳಿ ಹೊರಟುಹೋದ. ಜಾರಿಡಾ ನಡು ಗುತ್ತಾ ಕಣ್ಣೀರಿಡುತ್ತಾ ಕುಳಿತ್ತಿದ್ದುದನ್ನು ಅವನು ಗಮನಿಸದೆ ಹೋಗಿದ್ದ.

ಜಾರಿಡಾಗೆ ಫಾತಿಮಾಯೆಂಬ ನ್ಯೂಬಿಯಾ ಜಾತಿಯ ಕಗ್ಗೂಬೆ- ಸೇವಕಿಯಿದ್ದಳು. ಜಾರಿಡಾ ಅವಳನ್ನು ಕರೆದು, ತಾನು ಸಾದಕ್ ಆಲಿ ಯನ್ನು ಇಷ್ಟವಿಲ್ಲದಿದ್ದರೂ ಮದುವೆಯಾಗಬೇಕಾಗಿ ಬಂದ ವಿಚಾರವನ್ನು ಕಣ್ಣೀರಿಡುತ್ತಾ ತಿಳಿಸಿದಳು. ಹೇಗಾದರೂ ಆ ಘಟನೆಯಿಂದ ಪಾರ

ಮಾಡಬೇಕೆಂದು ಕೇಳಿಕೊಂಡಳು. "ತಂದೆಯ ಇಚ್ಛೆಯಂತೆ ನಡೆಯು ವುದು ನಿನ್ನ ಧರ್ಮ. ಸಾದಕ್ ಆಲಿ ನಿನಗೆ ಸರಿಯಾದ ಜೊತೆಯಾದವನೇ. ನಿನ್ನ ಯೌವನ, ಸೌಂದರ್ಯಕ್ಕೆ ಅವನು ತಕ್ಕವನಾಗಿದ್ದಾನೆ. ಶ್ರೀಮಂತನ ಗೃಹದಲ್ಲಿ ಚೆನ್ನಾಗಿ ಬಾಳುವೆ" ಎಂದು ಫಾತಿಮಾ ಇಷಾಬಿಲ್ ಆಡಿ ದಂತೆಯೇ ಹೇಳಿದಳು.

ಫಾತಿಮಾ ಹೇಳಿದುದನ್ನು ಕೇಳಿ ಅವಳ ಕಪ್ಪು ಕಣ್ಣುಗಳನ್ನು ನೋಡುತ್ತಾ "ನೀನೂ........ತಂದೆಯಂತೆಯೇ ಆಡುವೆ. ನನ್ನ ಗೋಪ್ಯ ವಿಚಾರ ನಿನ್ನ ಕಿವಿಯಲ್ಲಿ ಹಿಂದೆಯೇ ತಿಳಿಸಿರಲಿಲ್ಲವೆ?" ಎಂದಳು ಜಾರಿಡಾ.

ಜಾರಿಡಾ ಮಾತನ್ನು ಮುಂದುವರಿಸುವ ಮೊದಲೇ ಫಾತಿಮಾ ಅಡ್ಡಿ ಪಡಿಸಿ "ಹೌದು! ಬಾಲ್ಯದಲ್ಲಿ ಆಡಿದ ಮಾತುಗಳು ಈಗ ಲೆಕ್ಕಕ್ಕೆ ಬಾರವು. ಕೊಳಲೂದುವ ಅಮರನ್ ನಿನ್ನ ಪ್ರಿಯತಮನೆಂದು ಹೇಳುತ್ತಿದ್ದೆ. ಇನ್ನು ಅದನ್ನೆಲ್ಲಾ ಮರೆತುಬಿಡು. ಯಾರ ಕಿವಿಗಾದರೂ ಆ ಮಾತು ಬಿದ್ದು ಪ್ರಮಾದವಾದೀತು! ಕಳೆದುಹೋದ ಮಾತಿನಿಂದ ಪ್ರಯೋಜನವೇನು? ಸಾದಕ್ ಆಲಿಯನ್ನು ಮದುವೆಯಾಗಲು ಜಾಗ್ರತೆ ಸಿದ್ಧಳಾಗು" ಎಂದಳು.

"ಫಾತಿಮಾ! ಅಮರನ್ ನನ್ನ ಪ್ರಿಯತಮ. ಅವನನ್ನು ಮರೆಯ ಬೇಕೆನ್ನುವೆ. ಅವನ ಕೊಳಲಗಾನವನ್ನು ನೀನೂ ಕೇಳಿರುವೆ. ಬಾದಾಮಿ ಗಿಡ ದಕ್ಷಿಣ ಗಾಳಿಯಾಟದಲ್ಲಿ ಜೋಲಾಡುವಂತೆ ನನ್ನ ಹೃದಯವೂ ಅವನನ್ನು ನೆನೆದು ನಲಿಯುವುದು. ಅವನ ಮೊಗವನ್ನು ಒಂದು ಬಾರಿ ನೋಡಿದರೆ ಸಾಕು, ಸ್ವಚ್ಛ ತಿಳಿನೀರಿನ ತಳ ಕಂಡಂತೆ ಆನಂದವಾಗುವುದು. ಒಂದುಸಾರಿ ಅವನನ್ನು ಮುಟ್ಟಿ........ಪ್ರೀತಿಯನ್ನು ವ್ಯಕ್ತಿಪಡಿಸಿದರೆ........ ರೋಜಾಹೂವಿನ ಮೇಲೆ ಕೈಯಾಡಿಸಿದಂತೆಯೆ! ನಾನು ಅವನ ಪ್ರಿಯ ತಮೆ........" ಎಂದು ಜಾರಿಡಾ ನಿಲ್ಲಿಸಿದಳು.

ಕೋಪದಿಂದ ವ್ಯಗ್ರಳಾಗಿ ಕೂಗಿಕೊಳ್ಳುತ್ತಾ ಫಾತಿಮಾ "ಏನು ಹುಚ್ಚು ಮಾತನಾಡುತ್ತಿದ್ದೀಯೆ? ನೀನೂ ಅವನೂ ವನದಲ್ಲಿ ಕದ್ದು ಮಾತನಾಡಲು ನಾನು ಅವಕಾಶಕೊಟ್ಟುದೇ ತಪ್ಪಾಯಿತು. ಬಾಲ್ಯ ಕಳೆದು ಯೌವನಕ್ಕೆ ಕಾಲಿಟ್ಟು ಮುಖಪರದೆ ಹಾಕಿಕೊಂಡ ಮೇಲೆ ತೀರಿತು! ಹಳೆಯದನ್ನು

ಮರೆತುಬಿಡು. ಇಲ್ಲದಿದ್ದಲ್ಲಿ ತಂದೆಗೆ ತಿಳಿಸಿಬಿಡುವೆ" ಎಂದು ಬೆದರಿಕೆ ಹಾಕಿದಳು.

ಇಷಾಬೆಲ್, ಫಾತಿಮಾ ಯಾರೂ ಸಾದಕ್ ಆಲಿಯೊಡನೆ ಮದುವೆಯನ್ನು ತಪ್ಪಿಸಲಾರರು, ಎಂದು ಜಾರಿಡಾವಿಗೆ ಸ್ಪಷ್ಟವಾಯಿತು. ಅಮರನ್ ಜಾರಿಡಾವಿನ ಹಳೆಯ ಗೆಳೆಯ. ಅವನನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ಅವರಿಬ್ಬರೂ ಬಾಲ್ಯದಿಂದಲೂ ಒಂದೇಕಡೆ ಬೆಳೆದು ಯೌವನ ತಳೆದು ನಿಂತಿದ್ದರು. ಅವರಿಬ್ಬರ ಭೇಟಿ, ಪರಸ್ಪರ ಸಂಯೋಗ, ಪ್ರೀತಿಮಾತುಗಳಿಗೆ ಯಾರೂ ಅಡ್ಡಿಬಂದಿರಲಿಲ್ಲ. ಜಾರಿಡಾ ಅಮರನಿಗೆ ತನ್ನ ಹೃದಯವನ್ನು ಅರ್ಪಿಸಿಬಿಟ್ಟಿದ್ದಳು. ಜಾರಿಡಾ ಮೊಗಮುಚ್ಚಿ ಗಂಭೀರಳಾಗಿ ಮನೆಯಲ್ಲಿ ಉಳಿದಮೇಲೆ ಗೆಳೆತನ ಅಷ್ಟಕ್ಕೇ ನಿಂತಿತ್ತು.

ಕಿತ್ತಲೆಗಿಡಗಳ ನಡುವೆ ಮುಚ್ಚಂಜೆಯ ವೇಳೆ ಪ್ರೇಮಿಗಳು ತಮ್ಮ ಹೃದಯವನ್ನು ತೋಡಿಕೊಂಡು, ಗಲ್ಲಗಲ್ಲ ಹಚ್ಚಿ ಕೂತು, ಪರಸ್ಪರ ಪ್ರೀತಿ ಬೆಳೆಯಿಸಿಕೊಂಡಿದ್ದರು. ಕಾಂತಿಯುಕ್ತ ಕಣ್ಣುಳ್ಳ ಹದಿನೆಂಟು ವರ್ಷದ ಯುವಕ ಅಮರನನ್ನು, ಜಾರಿಡಾ ಮನಃಪೂರ್ತಿ ಪ್ರೀತಿಸಿದ್ದಳೆಂದರೆ ತಪ್ಪೇನು? ಹೀಗಿದ್ದಾಗ ಸಾದಕ್ ಆಲಿಯೊಬ್ಬ ಇವರಿಬ್ಬರಿಗೂ ಅಡ್ಡವಾಗಿ ಬಂದಿದ್ದ.

ಒಂದು ದಿನ ಉದಯವಾಗುವುದರೊಳಗಾಗಿಯೇ, ಅಮರನನ್ನು ನಿತ್ಯವೂ ಸಂಧಿಸುತ್ತಿದ್ದ ಪ್ರದೇಶಕ್ಕೆ ಜಾರಿಡಾ ಕದ್ದುಬಂದಳು. ಕೊಳಲಿನ ಮೇಲೆ ಬೆರಳಾಡಿಸುತ್ತಾ ಚಿಂತಾಮಗ್ನನಾಗಿದ್ದ ಅಮರ ಜಾರಿಡಾವನ್ನು ನೋಡುತ್ತಲೇ "ಏನು ನನ್ನ ಹುಣ್ಣಿಮೆಯ ಹೂವೆ! ಕಂದಿಹೋಗಿರುವೆ?" ಎಂದು ಮೃದುಮಧುರವಾಗಿ ಮಾತನಾಡಿಸುತ್ತಾ, ಕುಣಿಕುಣಿದು ಬರುತ್ತಿದ್ದ ಚಲುವೆ ಇಂದು ಕಣ್ಣೀರಿಡುತ್ತಾ ಬರುತ್ತಿದ್ದುದನ್ನು ಗಮನಿಸಿ, ಅವಳನ್ನು ಸಂತೈಸುತ್ತಾ ತನ್ನ ತೋಳತೆಕ್ಕೆಯಲ್ಲಿ ಸೇರಿಸಿಕೊಂಡ. ಮದುವೆಯ ಮಾತು ನಡೆದು ನಿಶ್ಚಯಕ್ಕೆ ಬಂದಿದ್ದರೂ ಪ್ರೇಮಿಗಳು ಕದ್ದು ಒಂದಾಗುವುದು ನಡದೇ ಇದ್ದಿತು.

ಅಮರನನ್ನು ಜಾರಿಡಾ ಮರೆಯಲಾಗಲಿಲ್ಲ. ಅವನೂ ವಿಚಾರ ತಿಳಿದು ಹೃದಯ ಒಡೆದುಕೊಂಡು, ಹಾಡಿನ ಕೊಳವೆಯೊಂದಿಗೆ ಅಲೆಯುತ್ತಾಯಿದ್ದ.

ಸಾದಕ್ ಆಲಿಯೊಂದಿಗೆ ಜಾರಿಡಾ ಮದುವೆ ನೆರವೇರಿತು. ಪೀಠಿಕೆಗೆ ಯಾಗಿ ಉಡುಗೊರೆಗಳ ಓಡಾಟ, ಪನ್ನೀರಿನ ಸ್ನಾನ, ಮದುವೆಯ ಮನೆ ಯಲ್ಲಿ ಹಾಸ್ಯ, ಎಲ್ಲಾ ಮುಗಿಯಿತು. ಪ್ರೇಮಿಗಳ ಸಮಾಗಮದ ಕೋಣೆ ಸುಸಜ್ಜಿತವಾಗಿ ಪೂರೈಸಲ್ಪಟ್ಟಿತು. ರಾತ್ರಿಯಾಯಿತು. ಇಷಾಬಿಲ್‌ಯಿದ್ದ ಕುಗ್ರಾಮ, ಮರಳುಕಾಡಿನಂತಿದ್ದ ಊರಿನಲ್ಲಿ ದಕ್ಷಿಣಗಾಳಿ ಬೀಸಿ ಕಿತ್ತಲೆಯ ಗಿಡವನ್ನು ಆಡಿಸಿತು. ಗಾಳಿ, ಪ್ರೀತಿಯ ಹೂವು, ತಾರೆಗಳು, ಪ್ರೇಮದ ಮಾತನಾಡಿದವು. ಇವುಗಳೊಂದಿಗೆ ಜಾರಿಡಾ ತೀರ್ಮಾನ ಮುಗಿಯಿತು. ಅವಳು ಸಾದಕ್ ಆಲಿಯ ಪ್ರೀತಿಯ ವಸ್ತುವಾಗಿ ಪರಿಗಣಿಸಲ್ಪಟ್ಟಳು.

ಅನೇಕ ಹುಣ್ಣಿಮೆಗಳನ್ನು ಜಾರಿಡಾ ಪತಿಗೃಹದಲ್ಲಿ ಕಳೆದರೂ ದೂರ ವಾಗಿ ಉಳಿದು ಮರೆಯಾಗಿದ್ದ, ಅಮರನ ಕೊಳಲನ್ನು ನೆನಸಿ ವ್ಯಸನ ಪಡುತ್ತಾ ಕೊರಗುತ್ತಿದ್ದಳು. ಸಾದಕ್ ಆಲಿ ಜಾರಿಡಾವನ್ನು ನಿರ್ಬಂಧ ದಲ್ಲಿಟ್ಟಿರಲಿಲ್ಲ. ನಿತ್ಯವೂ ಅವಳು ಸುಳಿಗಾಳಿಯಲ್ಲಿ ವ್ಯಾಯಾಮ ಮಾಡುವ ನಿಯಮವಿಟ್ಟುಕೊಂಡಿದ್ದಳು. ಒಂದು ಯಕ್ಷಿಣೀ ಆಟ ಆಗ ನಡೆಯಿತು.

ಒಮ್ಮೆ, ಶೀತಲಗಾಳಿಯಲ್ಲಿ ವ್ಯಾಯಾಮ ಮುಗಿಸಿಕೊಂಡು ಜಾರಿಡಾ ಛಾವಣಿಯ ಮೇಲೆ ವಿರಮಿಸುತ್ತ ಮಲಗಿದ್ದಳು. ಅವಳ ದೃಷ್ಟಿ ಮಸೀದಿಯ ಗೋಪುರದ ಮೇಲೆ ಹಾರಾಡುತ್ತಿದ್ದ ಪಾರಿವಾಳದ ಮೇಲೆ ಇತ್ತು. ಆಗ ಅವಳಿಗೆ ಮಧುರ ಮಂಜುಳ ಕೊಳಲಿನ ನಿನಾದ ಕೇಳಿಬಂತು.

ಆ ಸುಮಧುರ ಧ್ವನಿ ಆಲೈಸಿದ ಜಾರಿಡಾ ದೂರದಲ್ಲಿ ಯಾರು ಕೊಳಲು ನುಡಿಸುತ್ತಿರುವರೋ ಎಂದು ದಿಟ್ಟಿಸಿದಳು. ತೋಟದಲ್ಲಿ ವನ ಮಾಲಿ ವಿನಾ ಯಾರೂ ಇರಲಿಲ್ಲ. ಆ ವನಮಾಲಿ, ಸಾದಕ್ ಆಲಿಯ ತೋಟದ ಮಾಲಿ ಅಮರನಾಗಿ ಕೊಳಲೂದುತ್ತಿದ್ದ. ಅವನು ಎತ್ತರವಾದ ಮರದ ಮೇಲೆ ಕೂತು ಬಾರಿಸುತ್ತಿದ್ದ. ಜಾರಿಡಾ ಕಣ್ಣುಬಿಟ್ಟು ಹುಡುಕು ತ್ತಿದ್ದಾಗಲೇ ಅವನೂ ಎಚ್ಚೆತ್ತು, "ಪ್ರಿಯತಮೆ" ಎಂದ. ಮರಳುಗಾಡಿನ ಮಾಯಾಜಾಲದಂತೆ ಆ ಪದ ಗಾಳಿಯಲ್ಲಿ ಲೀನವಾಯಿತು.

ಸಾದಕ್ ಆಲಿಯ ಮನೆಯಲ್ಲಿ ಅಮರನನ್ನು ಕಂಡವರು ಯಾರೂ ಇರಲಿಲ್ಲ. ಅವನು ಪರಾಧೀನ. ಆದುದರಿಂದ ಯಾರೂ ಗಣನೆಗೆ ತಂದಿರ

ಲಿಲ್ಲ. ಪ್ರೀತಿಯ ಹಾದಿಯಲ್ಲಿ ದೊಡ್ಡ ಪ್ರತಿಬಂಧಕ ಒಂದಿರುವುದು ಮರ ವನ್ನೇರಿದ ಅಮರನಿಗೂ ಛಾವಣಿ ಅಲಗಿಗೆ ಬಂದು ನಿಂತಿದ್ದ ಜಾರಿಡಾವಿಗೂ ಗೊತ್ತಿದ್ದಿತು.

ಸಾದಕ್ ಆಲಿ ಒಂದು ಸಣ್ಣ ಸಂಸಾರದ ಜಗಳ ವಿಚಾರಿಸಿ ವ್ಯವಸ್ಥೆ ಮಾಡಿಬರಲು ತಾನಿದ್ದ ಊರಿನಿಂದ ದೂರ ಹೋಗಬೇಕಾಯಿತು. "ಒಂದು ವಾರದೊಳಗೆ ಹಿಂದಿರುಗಿ ಬರುವೆ. ನಿನ್ನ ಸಹಾಯಕ್ಕೆ ಸೇವಕರಿದ್ದಾರೆ. ಎಚ್ಚರಿಕೆಯಿಂದಿರು" ಎಂದು ಹೇಳಿ ಅವನು ಊರುಬಿಟ್ಟ. "ಪ್ರಿಯತಮ, ನಿನ್ನ ಇಚ್ಛೆಯಂತಾಗಲಿ" ಎಂದು ಜಾರಿಡಾ ಅವನನ್ನು ಕಳುಹಿಸಿಕೊಟ್ಟಳು. ಸಾದಕ್ ಆಲಿಗೆ ಜಾರಿಡಾ ತನ್ನನ್ನು ಸಂತೋಷದಿಂದ ಬೀಳ್ಕೊಟ್ಟಳೆಂದು ಮಾತ್ರ ತಿಳಿಯಿತು. ಸಂತೋಷದ ಹಿಂದೆ ಅಡಗಿದ್ದ ಗಾಢಭಾವ ಅರಿವಾಗಲಿಲ್ಲ.

ಸಾದಕ್ ಆಲಿ ಮರೆಯಾದ. ಪೂರ್ವಪ್ರಣಯಿ ಅಮರ ಮತ್ತು ಜಾರಿಡಾ ಇಬ್ಬರಿಗೂ ತಡೆಯಿಲ್ಲದಂತಾಯಿತು. ಜಾರಿಡಾ ಅಮರನನ್ನು ಅಂತಃಪುರಕ್ಕೆ ಬರಮಾಡಿಕೊಳ್ಳಲು ಒಂದು ಉಪಾಯ ಹೂಡಿದಳು. ಇತರ ಊಳಿಗದ ಆಳುಗಳಿಗೆ ಗೊತ್ತಾಗದಂತೆ ಒಂದು ತಂತ್ರ ಮಾಡಿದಳು. ಈ ಮುಂಚೆಯೇ ಜಾರಿಡಾ ತನ್ನ ಹಿಂದಿನ ಗೆಳತಿಯರನ್ನು ತನ್ನ ವಾಸಕ್ಕೆ ಬರ ಮಾಡಿಕೊಂಡು ಮಾತನಾಡಿಸಿ ಕಳುಹಿಸುವ ಪದ್ಧತಿ ಇಟ್ಟುಕೊಂಡಿದ್ದಳು. ಅಮರನನ್ನೂ ಹಾಗೆಯೇ, ಮುಹಮ್ಮದೀಯ ಸ್ತ್ರೀಯರು ಮುಖ ಮರೆಮಾಡಿ ಕೊಂಡು ಬರುವಂತೆ, ಸ್ತ್ರೀವೇಷದಲ್ಲಿ ಅಂತಃಪುರ ಪ್ರವೇಶಿಸಲು ಏರ್ಪಾಟು ಮಾಡಿದಳು. ಗೆಳತಿಯರು ಬರುವುದು, ನಾಲ್ಕಾರು ದಿನ ಅವಳಲ್ಲಿಯೇ ಉಳಿಯುವುದು ಸಾಮಾನ್ಯವಾಗಿದ್ದುದರಿಂದ ಸೇವಕರು ಯಾರೂ ಅನು ಮಾನಪಡಲಿಲ್ಲ.

ಪುರುಷರು ಯಾರೂ ಕೋಣೆಯ ಹತ್ತಿರ ಬರದಂತೆ ಸೂಚನೆಯಾಗಿ ಅಮರ, ಪದ್ಧತಿಯಂತೆ ಕೆಂಪು ಮೆಟ್ಟು ಬಿಟ್ಟುಬಂದಿದ್ದ. ಸಾದಕ್ ಆಲಿಯು ಊರು ಬಿಟ್ಟು ಹೋದಮೇಲೆ ಮಾರಿಜಾನ ಎಂಬ ಅರಬ್ಬಿಹೆಂಗಸು ಜಾರಿಡಾ ವನ್ನು ಕಾಣಲು ಬಂದಿರುವಳೆಂದು ಸೇವಕರು ಅರಿತುಕೊಂಡರು. ಈ ಹೆಸರಿನಿಂದಲೇ ಅಮರ ಜಾರಿಡಾವನ್ನು ಸೇರಿದುದು.

ಮಾರಿಜಾನ ಅಂತಃಪುರವನ್ನು ಸೇರಿ ಎಂಟು ದಿನಗಳಾಗಿ ಹೋಯಿತು. ಪ್ರಣಯಿಗಳು ಆಗ ಎಚ್ಚೆತ್ತು ತಮಗಾಗಿ ಕಾದಿದ್ದ ಅಪಾಯಕ್ಕಾಗಿ ಹೆದರುತ್ತಿದ್ದರು. ಸಾದಕ್ ಆಲಿ ಬೇಗ ಊರಿಗೆ ಹಿಂದಿರುಗಿ ಬರುವ ಸೂಚನೆ ಇರಲಿಲ್ಲ. ಅವನು ಹೊರ ಊರಿನಲ್ಲಿಯೇ ಉಳಿದು 'ಬೇಗ ಬಂದುಬಿಡುವೆನು' ಎಂದು ಹೇಳಿ ಬಹಳ ಬೆಲೆಬಾಳುವ ವಸ್ತ್ರಗಳನ್ನು ಬಹುಮಾನವಾಗಿ ಜಾರಿಡಾವಿಗೆ ಕಳುಹಿಸಿಕೊಟ್ಟಿದ್ದ.

"ಇನ್ನೂ ಒಂದು ವಾರ ಅವರು ಬರುವುದಿಲ್ಲ" ಎನ್ನುತ್ತಾ ಜಾರಿಡಾ ಅಮುರನನ್ನು ನಿಲ್ಲಿಸಿಕೊಂಡಳು. ಇಬ್ಬರೂ ಉಲ್ಲಾಸದಿಂದ ದಿನಗಳನ್ನು ಕಳೆಯಲಾರಂಭಿಸಿದರು. ಅಮುರ ಬಹಳ ಹೆದರಿದ. "ವಿಪತ್ತು ನಮಗೆ ಕಾದಿರುವುದು ನಿಜ. ಜೀವ ಮುಗಿದರೂ ಚಿಂತೆಯಿಲ್ಲ. ಹೃದಯ ಒಡೆದು ಕೊಂಡು ಬದುಕಲಾರೆ" ಎಂದು ಜಾರಿಡಾ ಹೇಳುತ್ತಿದ್ದಳು. "ಓ! ಕೋಮಲ ಜಿಂಕೆ! ನಿನ್ನ ಮೆಲುದುಟಿ ನನ್ನ ಮೃದುತುಟಿಯನ್ನು ಸೋಂಕಿಸಲಿ. ನಿನ್ನ ಚೆಲು ಕೋಮಲ ಕೈ ನನ್ನ ಯೌವನ ಬಳುಕಿನ ಶರೀರವನ್ನು ಅಪ್ಪಿಕೊಳ್ಳಲಿ. ರೋಜಾ ಎಲೆಯ ಮಾದರಿಯಿರುವ ನನ್ನ-ನಿನ್ನ ಕೈಗೆ ಕಬ್ಬಿಣ ಸರಪಳಿ ಬಿಗಿದರೂ ಚಿಂತೆಯಿರದು, ನಾ ನಿನ್ನ ಬಿಡಲಾರೆ" ಎಂದು ಹೇಳುತ್ತಾ ಪ್ರಣಯಿಗಳು ಪ್ರೇಮವಾಹಿನಿಯಲ್ಲಿ ಮುಳುಗಿಹೋಗಿದ್ದರು. ಕೆಂಪು ಮೆಟ್ಟು ಬಾಗಿಲ ಬಳಿ ಜಾಗ್ರತೆಗಾಗಿ ಬಿದ್ದಿತ್ತು. ಜಾರಿಡಾ ಪೂರ್ಣವಾಗಿ ಸಾದಕ್ ಆಲಿಯನ್ನು ಮರೆತಿದ್ದಳು.

ಸಾದಕ್ ಆಲಿ ಊರಿನಿಂದ ಹಿಂದಿರುಗಿ ಬಂದ. ಪ್ರೇಯಸಿಯನ್ನು ಕಾಣಲು ಆತುರದಿಂದ, ದಿವ್ಯವಾಗಿ ಒಪ್ಪವಾಗಿ ನಿರ್ಮಿಸಿದ ತೋಟದ ಆವರಣದಲ್ಲಿ ನಡೆದುಬಂದ. ಜಾರಿಡಾ ವಾಸಸ್ಥಾನದ ಮುಂಗಡೆ ಕೆಂಪು ಮೆಟ್ಟು ಇರುವುದನ್ನು ನೋಡಿ ಒಳಗೆ ಪ್ರವೇಶಿಸಲು ಸಾಧ್ಯವಿಲ್ಲದೆ ಅಸಮಾಧಾನದಿಂದ ಅಡ್ಡಾಡುತ್ತಿದ್ದ.

"ಒಳಗೆ ಯಾರಿರುವರು?" ಎಂದು ನ್ಯೂಬಿಯಾ ಸೇವಕಳನ್ನು ಅವನು ಪ್ರಶ್ನಿಸಿದ. ಮಾರಿಜಾನ ಎಂಬ ಗೆಳತಿ ಒಡತಿಯೊಡನೆ ಮಾತನಾಡುತ್ತಿರುವಳು, ಎಂದು ಸೇವಕಳು ತಿಳಿಸಿದಳು. ಮಾರಿಜಾನ ಹೆಸರು ಕೇಳಿದ

ಸಾದಕ್ ಆಲಿ ಸಂದೇಹಿಸುತ್ತಾ, ತಾನು ಊರಿನಿಂದ ಹಿಂದಿರುಗಿ ಬಂದ ವಾರ್ತೆಯನ್ನು ಜಾರಿಡಾವಿಗೆ ತಿಳಿಸೆಂದು ಸೇವಕಿಗೆ ಆಜ್ಞೆ ಮಾಡಿದ.

ಜಾರಿಡಾಯಿದ್ದ ಆವರಣದ ಮುಂಬಾಗಿಲು ಭದ್ರವಾಗಿ ಮುಚ್ಚಿತ್ತು. ಒಳಗಡೆಯಿದ್ದ ಒಡತಿಯನ್ನು ಎಚ್ಚರಿಸಲು ಸೇವಕಿ ಸಮೀಪಕ್ಕೆ ಬಂದು ಬಾಗಿಲು ತಟ್ಟಿದಳು. ಅವಳ ಕಿವಿಗೆ ಸ್ತ್ರೀ ಸಹಜವಾದ ಮೃದುಮಾತು ಕೇಳಿಸಲಿಲ್ಲ, ಬದಲಾಗಿ ಗಡಸು ಗಂಡಸಿನ ಧ್ವನಿ ಕೇಳಿಸಿತು. ಸೇವಕಳಿಗೆ ನಿಜಸಂಗತಿಯು ಗೊತ್ತಾಗಿ ನಡುಗು ಬಂದಿತು. ಆದರೂ ಯಜಮಾನನ ಕೋಪಕ್ಕೆ ತುತ್ತಾಗಬಾರದೆಂದು, ಜಾರಿಡಾವನ್ನು ಎಚ್ಚರಿಸಿ, ಯಜಮಾನರು ಊರಿನಿಂದ ಹಿಂದಿರುಗಿ ಬಂದ ವಾರ್ತೆಯನ್ನು ಉಸುರಿದಳು.

ಸಾದಕ್ ಆಲಿ ಬೇಗ ಹಿಂದಿರುಗಿ ಬರಲಾರನೆಂಬ ನಂಬುಗೆಯಿಂದಿದ್ದ ಜಾರಿಡಾ, ಸ್ವೇಚ್ಛೆಯಿಂದ ನಿರ್ಭಯವಾಗಿ ಅಮರನೊಂದಿಗೆ ಇದ್ದುಬಿಟ್ಟಿದ್ದಳು. ಸೇವಕಳಿಂದ ನಿಜಸಂಗತಿ ತಿಳಿದವಳು ಕಂಗಾಲಾಗಿ, ಅಮರನನ್ನು ಕೊನೆಯ ಬಾರಿ ಆಲಂಗಿಸಿ, ಬಿಡಾರದಿಂದ ಸ್ತ್ರೀ ಉಡುಪಿನಿಂದಲೇ ಹೊರಗೆ ಪಾರಾಗುವಂತೆ ಕಳುಹಿಸಿಕೊಟ್ಟಳು.

ಸಾದಕ್ ಆಲಿ ಅಸಮಾಧಾನದಿಂದ, ಹೆಚ್ಚಾಗಿ ಅನುಮಾನದಿಂದ, ಹೊರಗೆ ತನಗಾಗಿ ಕಾಯುತ್ತಿದ್ದುದರ ಗಮನ ಜಾರಿಡಾವಿಗೆ ಇರಲಿಲ್ಲ.

ಬುರುಕಾ ಧರಿಸಿದ ಅರಬ್ಬೀ ಸ್ತ್ರೀವೇಷದಲ್ಲಿಯೇ, ಅಮರ ಬಿಡಾರದಿಂದ ಹೊರಗೆ ಬಂದು ತಾನು ಬಿಟ್ಟಿದ್ದ ಕೆಂಪು ಮೆಟ್ಟು ತುಳಿದು ಹೊರಟು ಹೋದ. ಸಾದಕ್ ಆಲಿ ಒಡನೆಯೇ ಜಾರಿಡಾವನ್ನು ಕಾಣಲು ಹೋಗಲಿಲ್ಲ. ಜನಾನಾದಿಂದ ಹೊರಹೊರಟ ವ್ಯಕ್ತಿಯನ್ನು ಅನುಸರಿಸಿದ. ಆ ಬಳಿಕ ಸ್ವಲ್ಪಹೊತ್ತಿನ ಮೇಲೆ ಹಿಂದಿರುಗಿ ಬಂದ.

"ನಿಮ್ಮನ್ನು ಬಹಳಹೊತ್ತು ಕಾಯಿಸಿದೆನಲ್ಲವೆ?" ಎಂದು ಜಾರಿಡಾ ಎಂದಿನಂತೆ ಸಾದಕ್ ಆಲಿಯನ್ನು ಬರಮಾಡಿಕೊಂಡಳು. ಅವನು ಸ್ವಲ್ಪವೂ ಅನುಮಾನ ತೋರ್ಪಡಿಸದೆ "ಹೌದು, ಬಹಳಹೊತ್ತು ಕಾಯಿಸಿದೆ! ನಿನಗಾಗಿ ನಾನೆಷ್ಟು ಭಾರಿ ಉಡುಗೊರೆಗಳನ್ನು ಕಳುಹಿಸಿದೆ. ಈಗ ಎಲ್ಲ

ಕ್ಕಿಂತಲೂ ಮಿಗಿಲಾದ ವಸ್ತುವೊಂದನ್ನು ನಿನಗಾಗಿ ತಂದಿದ್ದೇನೆ. ಅದನ್ನು ನೋಡಲು ನೀನು ಆತುರಪಡುತ್ತಿರುವೆಯಷ್ಟೆ!" ಎಂದನು.

ಜಾರಿಡಾ ಹೃದಯವು ಒಂದೇ ಸಮನೆ ಬಡಿದುಕೊಳ್ಳುತ್ತಿತ್ತು. ಅವಳು ಭಯಭ್ರಾಂತಳಾಗಿ ಅವನನ್ನೇ ನೋಡುತ್ತಿದ್ದಳು. ಸಾದಕ್ ಆಲಿಯ ಸಂಜ್ಞೆಯಂತೆ, ಸೇವಕರು ಬಹಳ ಭಾರವಾದ ಪೆಟ್ಟಿಗೆಯೊಂದನ್ನು ಹೊತ್ತು ತಂದು ಅವನಿದ್ದ ಸ್ಥಳದಲ್ಲಿ ಇಟ್ಟುಹೋದರು.

"ಪ್ರಿಯತಮೆ, ಈ ಪೆಟ್ಟಿಗೆಯಲ್ಲಿ ಅಮೂಲ್ಯವಾದ ವಸ್ತುವಿದೆ. ಅದೇನೆಂದು ಬಲ್ಲೆಯಾ? ತೆಗೆದು ನೋಡು!" ಎಂದನು.

ಜಾರಿಡಾ ಬೆದರುತ್ತಲೇ ನಡುಗುವ ಕೈಯಿಂದ ಪೆಟ್ಟಿಗೆಯನ್ನು ತೆರೆದಳು. ಸುರುಳಿಸುರುಳಿಯಾಗಿ ತೆಳುವಾದ ಬಟ್ಟೆಯಲ್ಲಿ ಮರೆಮಾಡಿದ್ದ ಗಂಟನ್ನು ಕಂಡು ಬಿಚ್ಚಲಾರಂಭಿಸಿದಳು. ಕಂಡುದೇನು? ಅವಳ ಪ್ರಿಯತಮನಾದ ಅಮರನ ಶಿರ, ರಕ್ತದ ಮಡುವಿನಲ್ಲಿ ತೊಯ್ದಿತ್ತು! ಅವಳ ಎದೆ ಧಸ್ಸೆಂದಿತು. ಒಡನೆಯೇ ಗಟ್ಟಿಯಾಗಿ ಸ್ಮೃತಿಯಿಲ್ಲದೆ ಕೂಗಿಕೊಂಡಳು. ಸಾದಕ್ ಆಲಿ ಅವಳ ಕುತ್ತಿಗೆಯನ್ನು ಹಿಡಿಯುವ ಮೊದಲೇ ಜಾರಿಡಾ, ಸೊಂಟದಲ್ಲಿ ನೇತಾಡುತ್ತಿದ್ದ ಕತ್ತಿಯನ್ನು ಹಿರಿದು ತನ್ನ ಎದೆಗೆ ನಾಟಿಕೊಂಡಿದ್ದಳು.



# ಮಾತುಗಾರ

ಅವನೊಬ್ಬ ಹೆಸರಾಂತ ವಾಗ್ಮಿ. ಅವನ ವಾಕ್‌ಚಾತುರ್ಯಕ್ಕೆ ಜನರು ಮುಗ್ಧರಾಗಿ ಹೋಗಿದ್ದರು. ಅವನ ಮಾತಿನ ಸುಳಿಗೆ ಸಿಕ್ಕಿ ವಿರೋಧ, ಪ್ರತಿರೋಧ ವಿಚಾರಗಳು ತಾರುಮಾರಾಗುತ್ತಿದ್ದವು. ಅವನ ಸಹಾಯ, ಅನೇಕವೇಳೆ ಜನರಿಗೆ ಅತ್ಯಾವಶ್ಯಕವಾಗಿರುತ್ತಿತ್ತು. ಅವನು ಪ್ರಮಾಣ ಪುರುಷನಂತೆ, ತಡೆಯಿಲ್ಲದೆ ಪ್ರವಾಹದಂತೆ ನಿರಾಯಾಸದಿಂದ ನುಡಿಯು ತ್ತಿದ್ದುದನ್ನು ಕೇಳಿ, ಬಹಳವಾಗಿ ಹೊಗಳುತ್ತಿದ್ದರು. ಯೋಚಿಸದೆ, ತಡೆ ಯಿಲ್ಲದೆ, ಯಾವ ಯಾವ ವಿಷಯವನ್ನೋ ಕುರಿತು ಮಾತನಾಡುವುದು ಸಾಮಾನ್ಯ ಕೆಲಸವಲ್ಲ! ಅವನ ಶಬ್ದಕೋಶ ಸಮೃದ್ಧಿಯಾಗಿತ್ತು. ಜನ ರನ್ನು ತನ್ನ ವಾಕ್‌ಝುರಿಯಲ್ಲಿ ಒಲಿಸಿಕೊಳ್ಳುವ ಜಾಲವೂ ಅವನಿಗೆ ಗೊತ್ತಿತ್ತು. ಯಾವುದಾದರೂ ವ್ಯವಸ್ಥಿತ ಸಭೆಯಲ್ಲಾಗಲೀ ಗಾನಮಂಡಲಿ ಯಲ್ಲಾಗಲೀ ಅವನು ಯಾವಾಗಲೂ ಇರುತ್ತಿದ್ದ. ರಾಜಕೀಯ ಮಂಡಪ ದಲ್ಲಿ ಅವನಿಗೆ ಮುಖ್ಯಸ್ಥಳ ಸಿದ್ಧವಾಗಿರುತ್ತಿತ್ತು. ಅಲ್ಲಿಯೂ ಸಮಯೋಚಿತ ವಾಗಿ ಎಲ್ಲರಿಗೂ ರುಚಿಸುವಂತೆ ಮಾತನಾಡಿ, ಅವನು ತನ್ನ ನಿತ್ಯದ ಚಾತು ರ್ಯದ ಸ್ವರಮಾಲಿಕೆಯಿಂದ ಮನ್ನಣೆ ಗಳಿಸಿಕೊಳ್ಳುತ್ತಿದ್ದ. ಬಹು ದಿನದ ಮೇಲೆ ಪ್ರಸಿದ್ಧಿಗೆ ಬಂದ ಈ ಮಾತುಗಾರನಿಗೆ ಸರಿಸಮಾನರಾಗಿ ಯಾರೂ ನಿಲ್ಲಲಾರರೆಂದು ನಿಗದಿಯಾಯಿತು.

ಇವನ ಬಾಯಿನುಡಿಯಲ್ಲಿ ಅಪಶಬ್ದ, ನಿಂದಾತ್ಮಕ, ತುಚ್ಛ ನುಡಿ ಗಳಿರಲಿಲ್ಲ. ಹೆಚ್ಚಾಗಿ, ಇವನು ವಿಷಯದ ಸಾರಾಸಾರ ದೃಷ್ಟಿಯನ್ನು ವ್ಯಕ್ತಿಗಳ ಗುಣವರ್ಣನೆಯನ್ನು ಮಾಡುತ್ತಿದ್ದನಲ್ಲದೆ, ಧರ್ಮಾಧಿಕಾರಿ ಯಂತೆ ವ್ಯವಸ್ಥಿತರೀತಿಯಲ್ಲಿ ಕೆಲಸ ಪೂರೈಸುತ್ತಿದ್ದ. ಕಲ್ಪನಾಶಕ್ತಿ ಒಂದು ಅಪೂರ್ವಲಕ್ಷಣ ಮಾತುಗಾರನಿಗೆ ಹಸ್ತಗತವಾಗಿತ್ತು. ಕ್ರಮೇಣ ಸಾರ್ವ ಜನಿಕ ಮಟ್ಟದಿಂದ ಇವನ ಖ್ಯಾತಿ ಸರ್ಕಾರಮಂಡಳಿಯ ಎತ್ತರಕ್ಕೆ ಬೆಳೆಯಿತು.

ಒಬ್ಬ ಸರ್ಕಾರಿ ಉನ್ನತಾಧಿಕಾರಿಗೆ, ಈ ಮಾತುಗಾರನ ಸಹಾಯ ಒಮ್ಮೆ ಬೇಕಾಯಿತು. ಮಾತುಗಾರನ ಪರಿಚಯವೂ ಅಧಿಕಾರಿಗಿರಲಿಲ್ಲ. ಸರ್ಕಾರಾಧಿಕಾರಿಯ ಸಹೋದ್ಯೋಗಿಯೊಬ್ಬನನ್ನು ಒಂದೂರಿನಿಂದ ಮತ್ತೊಂದು ಸ್ಥಳಕ್ಕೆ ವರ್ಗಾಯಿಸಿದ್ದರು. ಸಹೋದ್ಯೋಗಿ ವರ್ಗಾಯಿಸಲ್ಪಟ್ಟ ಸ್ಥಳ ಮುಟ್ಟಿ ಅಧಿಕಾರ ವಹಿಸಿಕೊಳ್ಳುವುದಕ್ಕೆ ಮುಂಚೆಯೇ ಹಠಾತ್ತಾಗಿ ತೀರಿಹೋದ. ಉನ್ನತಾಧಿಕಾರಿಗೆ ಈ ವಿಚಾರ ತಿಳಿದು ಬಹಳ ವಿಷಾದವಾಯಿತು. ತೀರಿಹೋದ ಗೆಳೆಯ ಸಹೋದ್ಯೋಗಿಯ ಕೊನೆಯ ಸ್ಮರಣೀಯ ಕೆಲಸ ಮುಗಿಸಲು, ಉನ್ನತಾಧಿಕಾರಿಗೆ ಮಾತುಗಾರನ ಸಹಾಯ ಬೇಕಾಯಿತು.

ಪರಿಚಯವಿಲ್ಲದ ಮಾತುಗಾರನನ್ನು ಕೆಲಸಕ್ಕೆಳೆಯಲು ಅಧಿಕಾರಿ ಬಹಳ ಪ್ರಯಾಸಪಡಬೇಕಾಯಿತು ಮಾತುಗಾರನಿಗೆ ವಿರಾಮವೇ ಇರುತ್ತಿರಲಿಲ್ಲ. ತಾನೊಬ್ಬ ಸ್ವತಂತ್ರ ಸ್ವಚ್ಛಂದಪುರುಷನೆಂದು, ತನಗೆಲ್ಲವೂ ತಿಳಿದಿದೆಯೆಂದು, ಅಧಿಕಾರಿವರ್ಗದಲ್ಲಿ ತನಗೆ ಹೆಚ್ಚು ಪ್ರಭಾವವಿದೆಯೆಂದು ನೆಚ್ಚಿ ಮಾತುಗಾರ ಮೆರೆಯುತ್ತಿದ್ದ. ಉನ್ನತಾಧಿಕಾರಿ ಹೇಗೋ ಮಾತುಗಾರನನ್ನು ಒಲಿಸಿ ಸ್ಮಾರಕ ಪ್ರಕರಣಕ್ಕೆ ಕರೆದೊಯ್ದಿದ್ದ. ಸ್ವೇಚ್ಛಾ ಪ್ರವರ್ತಕ ಮಾತುಗಾರನಿಗೆ ಸತ್ತವನ ಸೂಕ್ಷ್ಮ ಪರಿಚಯವನ್ನು ಅಧಿಕಾರಿ ವಿವರಿಸಿದ್ದ. ಹಠಾತ್ತನೆ ಕೊನೆಯುಸಿರುಬಿಟ್ಟು ಲೋಕದಿಂದ ಪಾರಾದ ಗೆಳೆಯನ ಅಂತ್ಯಕ್ರಿಯೆ ಚೆನ್ನಾಗಿ ನಡೆಯಲೆಂದು ಅಧಿಕಾರಿಯ ಆಶಯವಾಗಿತ್ತು. ಈ ಪ್ರಕರಣ ಚೆನ್ನಾಗಿ ಮುಗಿಯುವುದಕ್ಕೆ ಮಾತುಗಾರನ ಹೊಣೆ, ವಾಕ್‌ಝರಿ ಮುಖ್ಯವಾಗಿತ್ತು.

ತಲೆತಿರುಕ ಮಾತುಗಾರ ಸತ್ತವ ಯಾರೆಂದು ನೆಟ್ಟಗೆ ತಿಳಿಯುವ ಗೋಜಿಗೆ ಹೋಗದೆ ಸಮಯಸ್ಫೂರ್ತಿಯಿಂದ, ಜಾಣ್ಮೆಯ ಕೆಲಸ ಮುಗಿಸುವ ಹವಣಿಕೆಯಲ್ಲಿದ್ದುಬಿಟ್ಟ.

ಶ್ರವಸಂಸ್ಕಾರಯೋಜನೆ ದೂರದಲ್ಲಿ ನಡೆಯುತ್ತಿತ್ತು. ಹೊಸಬಟ್ಟೆಯಲ್ಲಿ ಮೃತಶರೀರವನ್ನು ಸುತ್ತಿ, ಸುಗಂಧವನ್ನೆರಚಿ ಶ್ರವದ ಸುತ್ತಲೂ ಜನರು ನಿಂತು ದುಃಖಪ್ರದರ್ಶನ ಮಾಡುತ್ತಿದ್ದರು. ಸತ್ತವನು ಗಣ್ಯ

ಮನುಷ್ಯನೆಂದಮೇಲೆ ಅವನ ಸ್ನೇಹಿತರು ಹೆಚ್ಚಾಗಿಯೇ ಸೇರಿದ್ದರು. ಸಂಸ್ಕಾರಕ್ರಮುವನ್ನು ಮೊದಲುಮಾಡಿ ಸತ್ತವನ ಗುಣಗಾನಮಾಡಲು ಕರೆದುತಂದಿದ್ದ ಮಾತುಗಾರನನ್ನು ಅಧಿಕಾರಿ ಮುಂದೂಡಿದನು. ಮಾತು ಗಾರ ನಿಯಮಿಸಿದ ಕೆಲಸವನ್ನು ಮುಗಿಸಬೇಕಲ್ಲವೆ? ಅವನು ಎತ್ತರವಾದ ಕಲ್ಲುಪೀಠವನ್ನೇರಿ ಮಸಣದಲ್ಲಿ ವಾಕ್‌ಪ್ರವಾಹ ಹರಿಸಲು ಪ್ರಾರಂಭಿಸಿದ.

"ಸಾವು ಜನಕ್ಕೆ ಅಂಟಿಬಂದುದು. ನಿರ್ದಯ, ಕಠೋರವಾದ, ಉಗ್ರ ರೂಪದ ಸಾವನ್ನು ಎಲ್ಲರೂ ಒಂದು ದಿನ ಕಾಣಲೇಬೇಕು. ಜೀವ ಜಯಿಸಿ ದಂತೆ ಸಾಯಲೂ ಸಿದ್ಧವಾಗುತ್ತದೆ........"ವೇದಾಂತ ಪ್ರಕರಣದ ಮಾತು ಇಲ್ಲಿಗೆ ಮುಗಿಯಿತು." "ಇಲ್ಲಿ ಎಲ್ಲರೂ ಮೃತಜೀವಿಗೆ ಕಟ್ಟಕಡೆಯ ಗೌರವ ಸಲ್ಲಿಸಲು ಸೇರಿರುತ್ತೀರಿ. ಈ ಚಿರನಿದ್ರೆಯಲ್ಲಿರುವ ಜೀವಿ ಖ್ಯಾತಿವಂತ ಧೀರ ಯೋಧ" ಎಂದು ತಡೆಯಿಲ್ಲದೆ ಮಾತಿನಮಳೆ ಕರೆಯಲಾರಂಭಿಸಿದ. ಸತ್ತವ ನಿಜವಾಗಿ ಯೋಧನಾಗಿರಲಿಲ್ಲ. ಅವನೊಬ್ಬ ಎಳೆಗೂಸಿನಹೃದಯಿ ಪುಕ್ಕಲು ಮನುಷ್ಯನಾಗಿದ್ದ. ರಣಭೂಮಿಯ ನೆರಳು ಕೂಡ ಅವನು ನೋಡಿರಲಿಲ್ಲ. ಜನ ಮಾತುಗಾರನ ಒಕ್ಕಣೆ ಕೇಳಿ ಒಬ್ಬರ ಮುಖವನೊಬ್ಬರು ನೋಡಹತ್ತಿ ದ್ದರು. ವಾಗ್ಮಿ ಮುಂದುವರಿಸಿ "ಚಿರನಿದ್ರೆಯಲ್ಲಿರುವ ವ್ಯಕ್ತಿ ಒಮ್ಮೆ ಭಯಾನಕ ಪ್ರಸಂಗದಲ್ಲಿ ಧೈರ್ಯದಿಂದ ಕಾದಾಡಿ ಸಾವಿರಾರು ಜನರನ್ನು ಮೃತ್ಯುಮುಖದಿಂದ ಪಾರುಮಾಡಿದ" ಎಂದು ನುಡಿಯುತ್ತಿದ್ದ. ಧೈರ್ಯವೇ ಇಲ್ಲದ ಸಾಧುಪ್ರಾಣಿಯನ್ನು ಹೀಗೇಕೆ ಮಾತುಗಾರ ಬಣ್ಣಿಸುತ್ತಿದ್ದಾನೆ ಯೆಂದು ಜನರು ಮರಮರನೆ ತಮ್ಮಲ್ಲಿ ಮಾತನಾಡಿಕೊಂಡರು. ದುಃಖ ಪ್ರದರ್ಶನದಲ್ಲಿ ಯಾರೂ ತುಟಿಯಾಡಿಸದೆ ನಿಂತಿದ್ದರು. ಆದರೆ ಸಲ್ಲದ ಮಾತು ಕೇಳಿ ಅವರೆಲ್ಲಾ ಚಕಿತರಾಗಿ ಗೊಣಗುಟ್ಟಲಾರಂಭಿಸಿದರು.

ಜೀವತ್ಯಾಗಮಾಡಿದ ವ್ಯಕ್ತಿ ಯೋಧನಾಗಿರಲಿಲ್ಲ. ಹೊಸದಾಗಿ ಸ್ಥಳ ವನ್ನು ಹಿಡಿಯಲೋಸುಗವಾಗಿ ವರ್ಗಾಯಿಸಲ್ಪಟ್ಟ ವ್ಯಕ್ತಿಮಾತ್ರನಾಗಿದ್ದ. ಈ ಮೊದಲು ತನಗೆ ಮುಂಚೆ ಈ ಸ್ಥಳದಲ್ಲಿ ಕೆಲಸ ನಿಭಾಯಿಸುತ್ತಿದ್ದ ವ್ಯಕ್ತಿ ಯೋಧನಾಗಿದ್ದ, ಧೀರಪುರುಷನಾಗಿದ್ದ. ಅವನು ಸತ್ತನೆಂದು, ಅವನೇ ಹೊಸಬಟ್ಟೆ ಸುತ್ತಿಕೊಂಡು ಬಿದ್ದಿರುವಂತಹ ಶ್ರವವೆಂದು ಅಪಾರ್ಥಮಾಡಿ ಕೊಂಡು ಮಾತುಗಾರ ನಿರ್ಗಳವಾಗಿ ಮಾತನಾಡುತ್ತಿದ್ದ.

ದೂರದಲ್ಲಿ ಕಲ್ಲುಮಂಟಪದ ಹಿಂದೆ ಯಾವನು ಸತ್ತನೆಂದು ಮಾತುಗಾರ ಬಣ್ಣಿಸುತ್ತಿದ್ದನೋ ಆ ವ್ಯಕ್ತಿ, ಅಜಾನುಬಾಹು ಮಾತುಗಾರನ ಮುಂದೆ ಕೋಪದಿಂದ ಕುದಿಯುತ್ತಾ ಬಂದು ನಿಂತುಕೊಂಡ. ಮಾತುಗಾರನ ಸೊಲ್ಲು ಕಡಿದುಹೋಯಿತು. ಅವನು ಕಲ್ಲಿನಂತೆ ಚೇತನವನ್ನು ಕಳೆದುಕೊಂಡವನಂತೆ ನಿಂತುಬಿಟ್ಟ.

"ನೀನೇಕೆ ತಡೆಬಡೆಯಿಲ್ಲದೆ ಮಾತನಾಡುತ್ತಿದ್ದೀಯೆ! ಎಚ್ಚರ ತಪ್ಪಿದವನಂತೆ ಗಳಹುವುದೇಕೆ? ನೀನು ಸತ್ತವನನ್ನು ಸ್ಮರಿಸುತ್ತಿಲ್ಲ. ಅವನಿಗೆ ಸಲ್ಲದ ಅವಮಾನಮಾಡಿ, ನನಗೆ ಪ್ರತ್ಯಕ್ಷವಾಗಿ ಅವಮಾನಮಾಡಲು ಯತ್ನಿಸುತ್ತೀದ್ದೀಯೆ. ಒಬ್ಬರಿಗೆ ಕೇಡುಮಾಡುವುದಿದ್ದರೆ, ಅವಮಾನಮಾಡಬೇಕೆಂಬ ಇಚ್ಛೆಯಿದ್ದಲ್ಲಿ ನೇರವಾಗಿ ಧೈರ್ಯದಿಂದ ಎದುರಿಗೆ ಮಾಡಬೇಕು. ನೀನೆಂತಹ ವಾಗ್ಮಿ, ನಿನ್ನ ಜಾಣ್ಮೆಯನ್ನು ಹೊಗಳಬೇಕೋ! ತೆಗಳಬೇಕೋ!" ಎಂದು ನಿಜವಾದ ಯೋಧ ಮಾತುಗಾರನನ್ನು ಚೆನ್ನಾಗಿ ಅವಮಾನಗೊಳಿಸಿದ.

ಮಾತುಗಾರ ಸೋತು, ತಲೆತಗ್ಗಿಸಿ ಮುಸಣದಿಂದ ದೂರವಾಗಿ ಮೂಕನಂತೆ ಪಾರಾಗಿಹೋದ.



# ಚದುರಂಗದ ಕಥೆ

ಆಗ ವಾಜಿದ್ ಆಲಿಷಹನ ಕಾಲ. ಲಕ್ನೋನಗರ ಇಡೀ ಆನಂದದಲ್ಲಿ ಮುಳುಗಿತ್ತು. ಹಿರಿಯಕಿರಿಯರೆನ್ನದೆ, ಬಾಲವೃದ್ಧರೆನ್ನದೆ ಎಲ್ಲರೂ ಸುಖಸ್ವಪ್ನದಲ್ಲಿ ಮುಳುಗಿಹೋಗಿದ್ದರು. ಧೂಮ್ರಪಾನದಲ್ಲಿಯೋ ಅಥವಾ ಅಫೀಮು ಸೇವನೆಯಲ್ಲಿಯೋ ಜನರಿರುತ್ತಿದ್ದುದು ಸಾಮಾನ್ಯವಾಗಿತ್ತು. ಕಾಲ ಮತ್ತು ಅದರ ನಡಿಗೆಯನ್ನು ಯಾರೂ ಅರಿಯುವ ಗೋಜಿಗೆ ಹೋಗಿರಲಿಲ್ಲ. ಶ್ರೀಮಂತವರ್ಗದವರು, ಚದುರಂಗ ಆಟವನ್ನಾಡುತ್ತಾ ಕಾಲ ಕಳೆಯುತ್ತಿದ್ದರು. ಆಟದಲ್ಲಿ ಸಮಸ್ಯೆಹೂಡಿ, ಪರಸ್ಪರ ಸಾಮರ್ಥ್ಯವನ್ನು ತೋರಿಕೊಳ್ಳುವುದರಲ್ಲಿ ಅವರಿಗೆ ಪ್ರಿಯತೆಯಿತ್ತು.

ಮಿರ್ಜಾ ಸಜ್ಜಾದ್ ಆಲಿ, ಮಿರ್ ರೋಷನ್ ಆಲಿ ಎಂಬಿಬ್ಬ ಶ್ರೀಮಂತ ಗೆಳೆಯರಿದ್ದರು. ಈ ಗೆಳೆಯರಿಗೆ ಮನೆತನದಿಂದ ಬಂದಿದ್ದ ಶ್ರೀಮಂತಿಕೆಯಿತ್ತು. ಈ ದೆಸೆಯಿಂದ ಇವರಿಗೆ ಉದರನಿರ್ವಾಹದ ಭಾರವಿರಲಿಲ್ಲ. ಇವರು ಹೊತ್ತು ಕಳೆಯುವುದಕ್ಕೆ ಬಹುಕಾಲ ಆಟವಾಡುತ್ತಾ ಕೂಡುತ್ತಿದ್ದರು. ಚದುರಂಗದಾಟದಲ್ಲಿ ಕೂತೊಡನೆಯೇ ಹೊತ್ತು ಮಿಂಚಿನಂತೆ ಹಾಯ್ದುಹೋಗುತ್ತಿದ್ದುದು ಇವರ ಗಮನಕ್ಕೆ ಬೀಳುತ್ತಲೇಯಿರಲಿಲ್ಲ. ಬೆಳಗು ಬೈಗಾದರೂ ಇವರ ಚದುರಂಗದ ದಾಹ ದೂರವಾಗುತ್ತಿರಲಿಲ್ಲ. ಈ ಚದುರಂಗಪ್ರಿಯರಿಗೆ ಊಟ, ನಿದ್ರೆ, ವಿಶ್ರಾಂತಿ ಯಾವುದೂ ಬೇಕಾಗುತ್ತಿರಲಿಲ್ಲ. ಇಡೀ ದಿನ ಆಟದಲ್ಲಿ ಮುಳುಗಿ ಪ್ರಪಂಚದ ಮತ್ತಾವ ವಿಷಯಕ್ಕೂ ಕಿವಿಗೊಡದೆ ಕಾಲಹರಣಮಾಡುತ್ತಿದ್ದರು. ಆಟಪ್ರಿಯರು ಸ್ಥಳಹಿಡಿದು ಬಲವಾಗಿ ಕುಳಿತುಬಿಟ್ಟರೆ, ಸೇವಕರೇನು ಮಾಡಬೇಕು? ಊಟ ಉಪಚಾರಕ್ಕೆ ಒಡೆಯರನ್ನು ಹಲವು ಸಾರಿ ಎಚ್ಚರಿಸಿದರೂ ಕಿವಿಗೊಡದವರು "ಎಲೆಹರಡಿ, ಅನ್ನವನ್ನಿಕ್ಕಿ ಬಂದುಬಿಡುವೆವು" ಎಂದು ನುಡಿಯುತ್ತಿದ್ದರೇ ಹೊರತು ಹಾಸಿನಿಂದ ದೂರವಾಗಿ ಬರುತ್ತಿರಲಿಲ್ಲ. ಸಹನೆಮೀರಿದ ಸೇವಕರು, ಊಟದ ಎಡೆಯನ್ನು ಒಡೆಯರ ಮುಂದಿರಿಸಿ ನಡೆಯುತ್ತಿದ್ದರು.

ಈ ಚದುರಂಗಪ್ರಿಯರಿಗೆ ಹಿರಿಯರೆನಿಸಿದವರಿರಲಿಲ್ಲ. ವಿಸ್ತಾರವಾದ ಒಳಮನೆಯಲ್ಲಿ ಆಟಕ್ಕೆ ಕೂಡುತ್ತಿದ್ದರು. ಆಟದ ನಡುವೆ ಮಾತು ನಿಂತು, ಕಾಯಿಗಳು ಮಾತ್ರ ಚಲಿಸುತ್ತಿದ್ದವು. ಇವರು ನಿತ್ಯವೂ ಆಟಕ್ಕೆ ಕೂಡುತ್ತಿದ್ದುದು ಇತರರಿಗೆ ಸರಿಬೀಳುತ್ತಿರಲಿಲ್ಲ "ಈ ಹೊತ್ತು ಕಳೆಯುವ ಮಲ್ಲರು, ಮನೆ ಹಾಳುಮಾಡಿಕೊಳ್ಳುತ್ತಾರೆ" ಎಂದು ಸೇವಕರು ಮೊದಲಾಗಿ ಆಡಿಕೊಳ್ಳುತ್ತಿದ್ದರು.

ಬೇಗಂ ಮಿರ್ಜಾ ಸಜ್ಜಾದ್ ಆಲಿ ಚದುರಂಗದ ಆಟ ಒಂದು ವಿಧವಾದ ರೋಗವೆಂದು ತಿರಸ್ಕಾರ ಮಾಡುತ್ತಿದ್ದಳು. ನಿತ್ಯವೂ ಮಿರ್ಜಾನನು ಚದುರಂಗದಾಟವನ್ನು ಅಲ್ಲಗಳೆಯುವುದು ಅವಳ ಕೆಲಸವಾಗಿತ್ತು. ಮಿರ್ಜಾ ಯಾವುದನ್ನೂ ಲಕ್ಷಿಸುತ್ತಿರಲಿಲ್ಲ. ಅವನು ಮುಂಜಾನೆ ಹಾಸಿಗೆಯಿಂದ ಎದ್ದೊಡನೆಯೇ ಒಳಮನೆಯಲ್ಲಿ ಚದುರಂಗದ ಹಾಸನ್ನು ಬಿಚ್ಚಿ ಹರಡುತ್ತಿದ್ದ. ಬೇಗಂ ಹೊತ್ತಾದಮೇಲೆ, ಇರುಳು ಮಂಚವನ್ನೇರಿ ನಿದ್ರಿಸುತ್ತಿದ್ದಾಗಲೂ ಆಟಗಾರರು ಆಟ ಮುಗಿಸುತ್ತಿರಲಿಲ್ಲ. ಮಿರ್ಜಾನನ್ನು ಟೀಕಿಸುತ್ತಾ, ದ್ವೇಷಿಸುತ್ತಾಯಿದ್ದ ಬೇಗಂ, ಅವನ ಮೇಲಿನ ರೋಷವನ್ನೆಲ್ಲಾ ಸೇವಕರ ಮೇಲೆ ತೀರಿಸಿಕೊಳ್ಳುತ್ತಿದ್ದಳು.

"ಅವರಿಗೆ ಎಲೆಅಡಿಕೆ ಬೇಕೋ, ಇಲ್ಲಿಗೆ ಬಂದು ತೆಗೆದುಕೊಂಡು ಹೋಗಲಿ; ಅವರಿಗೆಲ್ಲಿ ಹೊತ್ತಿದೆ! ಊಟಕ್ಕೂ ಅವಕಾಶವಿಲ್ಲ. ಅವರ ಮುಂದೆಯೇ ಎಲೆಅಡಿಕೆ ಬಿನಾಡಿ ಬನ್ನಿ, ತಿಂದಾದರೂ ತಿನ್ನಲಿ, ನಾಯಿ ಬೆಕ್ಕುಗಳಿಗಾದರೂ ಎಸೆಯಲಿ" ಎಂದು ಸಿಟ್ಟಿನಿಂದ ಆರ್ಭಟಿಸುತ್ತಿದ್ದಳು. ಬೇಗಂ ತನ್ನ ಪತಿಯ ಸ್ನೇಹಿತನಾದ ಮಿರ್ ರೋಷನ್ ಆಲಿಯನ್ನು "ಮಿರ್-ಪಾತಕಿ" ಯೆಂದು ಉಪನಾಮದಿಂದ ಕರೆಯುತ್ತಾ ಮನಸ್ಸಿನಲ್ಲೇ ದ್ವೇಷಿಸುತ್ತಿದ್ದಳು.

ಬೇಗಂ ಒಂದುದಿನ ತಲೆನೋವಿನಿಂದ ಬಾಧೆಪಡುತ್ತಿದ್ದಳು. ಹಿರಿಯಾ ಎಂಬ ದಾಸಿಯನ್ನು ಕೂಗಿ "ನಮ್ಮ ಮನೆವೈದ್ಯರಿಂದ ತಲೆನೋವಿಗೇನಾದರೂ ಔಷಧಿ ಕಳುಹಿಸಬೇಕೆಂದು ಯಜಮಾನರಿಗೆ ಹೇಳಿ ಬಾ" ಎಂದು ಕಳುಹಿಸಿದಳು. ಬೇಗಂ ಆಜ್ಞೆಯಂತೆ ದಾಸಿ ಹಿರಿಯಾ ಮಿರ್ಜಾನಿಗೆ ತಿಳಿಸಿದಳು. "ನೀನು ಹೋಗು, ಬಂದುಬಿಡುವೆ" ಎಂದು ಹೇಳಿಕಳುಹಿಸಿ,

ಪರಿವೆಯಿಲ್ಲದೆ ಆಟದಲ್ಲಿ ಉಳಿದುಬಿಟ್ಟನು. ಪತಿಗಾಗಿ ಎದುರುನೋಡುತ್ತಿದ್ದ ಬೇಗಂ ಸಿಟ್ಟಿನಿಂದ ಉರಿಯುತ್ತಾ "ಅವರೇನು ಬರುವರೋ, ನಾನೇ ವೈದ್ಯರಲ್ಲಿಗೆ ಹೋಗಬೇಕೋ, ಕೇಳಿ ಬಾ" ಎಂದು, ಮತ್ತೊಮ್ಮೆ ಹಿರಿಯಾನನ್ನು ಓಡಿಸಿದಳು. ಕಾಯಿಗಳನ್ನು ಹೂಡಿ ಏನೋ ತಂತ್ರದಿಂದ ಮಿರ್‌ನನ್ನು ಸೋಲಿಸಲು ಮಿರ್ಜಾ ಹೂಡಿದ್ದ. ಈ ಸಮಯದಲ್ಲಿ ಹಿರಿಯಾ, ಬೇಗಂ ಹೇಳಿಕಳುಹಿಸಿದ ಸಿಟ್ಟಿನ ಮಾತನ್ನು ಮಿರ್ಜಾನಿಗೆ ತಿಳಿಸಿದಳು.

"ಅವಳೇನು ಸಾಯುತ್ತಿರುವಳೇನು? ಸ್ವಲ್ಪ ಹಾಗೆ ಸುಧಾರಿಸಿಕೊಳ್ಳಲಾರಳೆ!" ಎಂದು ಮಿರ್ಜಾ ಕೂಗಿಕೊಂಡ.

"ಒಳಗೆ ಹೋಗಿ ಸ್ವಲ್ಪ ವಿಚಾರಿಸಿ ಬರಬಾರದೆ? ಬೇಗಂ ಮನವನ್ನೇಕೆ ನೋಯಿಸುವುದು?" ಎಂದ, ರೋಷನ್ ಆಲಿ.

"ಏಕೆ? ಆಟದಲ್ಲಿ ನೀನು ಸೋಲುವುದು ಖಂಡಿತ. ಅದಕ್ಕಾಗಿ ಹೇಳುತ್ತಿದ್ದೀಯೇ" ಎಂದು ಮಿರ್ಜಾ ಹಾಸ್ಯಮಾಡಿದ.

"ನೀನು ಗೆಲ್ಲುವುದು ಖಂಡಿತವಿಲ್ಲ. ಇನ್ನೂ ನಾನು ಕಾಯಿ ನಡಿಸಬೇಕಾಗಿದೆ. ಒಳಗೆ ಹೋಗಿ ವಿಚಾರಿಸಿ ಬಾ. ಬೇಗಂ ಮನ ನೋಯಿಸಬೇಡ" ಎಂದು, ಮಿರ್ ರೋಷನ್ ಆಲಿ ಒತ್ತಾಯಪಡಿಸಿದ.

"ನಿನ್ನನ್ನು ಸೋಲಿಸುವವರೆಗೂ ನಾನಿಂದು ಕದಲಲಾರೆ" ಎಂದು ಹಠವಾದಿ ಮಿರ್ಜಾ ಕದಲದೆ ಕುಳಿತುಬಿಟ್ಟ.

"ಹಾಗಾದರೆ ನಾನು ಕಾಯಿಗಳನ್ನು ಮುಟ್ಟುವುದಿಲ್ಲ" ಎಂದು, ರೋಷನ್ ಕೈಕಟ್ಟಿದ.

"ನಾನು ವೈದ್ಯರಲ್ಲಿಗೆ ಹೋಗಬೇಕು, ಅವಳ ತಲೆನೋವಿಗೆ ಕಾರಣವಿಲ್ಲ; ನನ್ನನ್ನು ಬೆದರಿಸಲು ಹೂಡಿದ ಆಟವಾಗಿದೆ" ಎಂದು, ಮಿರ್ಜಾ ತಪ್ಪಿಸಿಕೊಳ್ಳಲು ಗೊಣಗಾಡಿದ.

"ಏನೇ ಇರಲಿ, ಬೇಗಂ ಕರೆಗೆ ಪುರಸ್ಕಾರವೀಯುವುದು ಒಳ್ಳೆಯದು" ಎಂದ, ರೋಷನ್ ಆಲಿ.

"ಆಗಲಿ, ಹೋಗುವುದಕ್ಕೆ ಮುಂಚೆ ಒಂದು ಕಾಯಿ ಮುಂದಿಟ್ಟು ಹೋಗುವೆ" ಎಂದ, ಮಿರ್ಜಾ ನಿಂತ.

"ಹಾಗಾಗದು. ನೀನು ಹೋಗಿ ಬರುವವರೆಗೂ ನಾನು ಒಪ್ಪುವುದೇ ಇಲ್ಲ" ಎಂದುಬಿಟ್ಟ ರೋರ್ಷ ಅಲಿ.

ಉಪಾಯಗಾಣದೆ ಮಿರ್ಜಾ ಬೇಗಂ ಕಾಣಲು ಹೋಗಬೇಕಾಯಿತು. ಬೇಗಂ ಮುಖ ಬಾಣಲೆಯಲ್ಲಿ ಬೆಂದು ಕೆಂಪಗಾದ ತಿನಿಸಿನಂತೆ ಆಗಿ ಹೋಗಿತ್ತು. ಕೋಪ ಮಿತಿಮೀರಿತ್ತು.

"ನಿಮಗೆ ಆಟವೆಂದರೆ ತೀರದ ಪ್ರೀತಿ, ಆಟದ ನಡುವೆ ಯಾರು ಸತ್ತರೂ ನೀವು ನೋಡಬಯಸುವುದಿಲ್ಲ. ಈ ಪ್ರಪಂಚಕ್ಕೆ ನಿಮ್ಮಂತಹ ನಿರುಪಯೋಗಿಗಳಿಂದ ಏನೂ ನಷ್ಟವಾಗದು" ಎಂದು, ಬೇಗಂ ಕೂಗಾಡಿದಳು.

ಮಿರ್ಜಾ ಸಂತೈಸುತ್ತಾ "ರೋರ್ಷ ನನ್ನನ್ನು ಬಿಟ್ಟುಕೊಡುವುದಿಲ್ಲ. ಅವನಿಂದ ತಪ್ಪಿಸಿಕೊಂಡು ಬರಲು ಅಸಾಧ್ಯವಾಯಿತು" ಎಂದು, ಸ್ನೇಹಿತನ ಮೇಲೆ ತಪ್ಪನ್ನು ಹೊರಿಸುತ್ತಾ ಮಾತನಾಡಿದ.

"ಅವನೊಬ್ಬ ಕೂತುಂಬುವವ, ನಿರುದ್ಯೋಗಿ; ಎಲ್ಲರೂ ಅವನಂತೆ ಕೆಲಸವಿಲ್ಲದವರೆ? ಅವನಿಗೇನು ಮಕ್ಕಳುಮರಿಗಳಿದ್ದಾರೆಯೋ ಇಲ್ಲವೆ ಅವರನ್ನು ಓಡಿಸಿಬಿಟ್ಟಿರುವನೋ" ಎಂದು, ಕೋಪದಿಂದ ಕೂಗಾಡಿದಳು.

"ಅವನು ಯಾವಾಗ ಆಟಕ್ಕೆ ಕೂತರೂ ಸರಿಯೆ, ನೆಲಕ್ಕೆ ಅಂಟಿಕೊಂಡವನಂತೆ ಕೂರುತ್ತಾನೆ. ನಾನು ನಿರ್ವಾಹವಿಲ್ಲದೆ ಅವನೊಂದಿಗೆ ನಿಲ್ಲಬೇಕಾಗುತ್ತದೆ" ಎಂದು, ಮಿರ್ಜಾ ಸುಳ್ಳಾಡಿದ.

"ನಮ್ಮ ಮನೆಯಿಂದೇಕೆ ಅವನನ್ನು ಹೊರಹಾಕಬಾರದು?"

"ಹಾಗಾಗದು. ನಮ್ಮ ಅಂತಸ್ತಿನವನೇ ಅವನು, ವಯಸ್ಸಿನಲ್ಲಿಯೂ ಹಿರಿಯ; ಹೀಗೆಂದ ಮೇಲೆ ಗೌರವದಿಂದ ಕಾಣಬೇಕಲ್ಲವೆ?"

"ನನ್ನಿಂದಾಗಲಾರದು! ಅವನಿಗೆ ಕೋಪ ಬಂದರೆ ಬರಲಿ. ನಾನೇ ಅವನನ್ನು ಹೊರದೂಡುತ್ತೇನೆ" ಎಂದು, ಬೇಗಂ "ಹಿರಿಯಾ! ನಡುಮನೆಯಿಂದ ಚದುರಂಗದ ಹಾಸನ್ನು ಸುತ್ತಿಕೊಂಡು ಬಾ. ಅಲ್ಲಿರುವವನಿಗೆ ಮಿರ್ಜಾ ಆಡಲು ಬರುವುದಿಲ್ಲವೆಂದು, ಹೋಗಬಹುದೆಂದು ಹೇಳಿ ಬಾ" ಎಂದು ಆಜ್ಞಾಪಿಸಿದಳು.

"ಬೇಗಂ ಬೇಡ! ಬೇಡ! ಅಷ್ಟು ಕಠಿಣಳಾಗಬೇಡ. ನನಗೆ ಅವಮಾನವಾಗುವಂತೆ, ತಲೆ ತಗ್ಗುವಂತೆ ಮಾಡಬೇಡ. ಖುದಾ! ಹೋಗಬೇಡ ನಿಲ್ಲು; ನಿಲ್ಲು!" ಎಂದವಳನ್ನು ಮಿರ್ಜಾ ನಿಲ್ಲಿಸಿದ.

ಬೇಗಂ ಕೋಪ ಇಳಿಯಲೇ ಇಲ್ಲ. "ಅವಳನ್ನೇಕೆ ನಿಲ್ಲಿಸುತ್ತೀರಿ? ಅವಳು ಹೋಗಲು ಅಡ್ಡಿಮಾಡಿದರೆ, ನಾನೇ ಹೋಗಿ ಹೇಳಿಬರುತ್ತೇನೆ" ಎಂದವಳು ಒಳಮನೆಯ ಕಡೆಗೆ ಧಾವಿಸಿದಳು. ಆಗ ಮಿರ್ಜಾ ಮುಖದ ಬಣ್ಣ ಬದಲಾಯಿಸಿತು. ಅವನು ದೈನ್ಯದಿಂದ ಬೇಗಮಳನ್ನು ನೋಡುತ್ತಾ "ದೇವರಾಣೆ ಹೋಗಬೇಡ! ಬೇಗಂ" ಎಂದು, ಕೇಳಿಕೊಂಡ.

ಬೇಗಂ ಅವನ ಕೋರಿಕೆಗೆ ಕಿವಿಗೊಡಲಿಲ್ಲ. ಕೋಪದಿಂದ ಉರಿಯುತ್ತಾ ಬಂದವಳು ಮೀರ್ ರೋಷನ್ ಅಲಿ ಇದ್ದ ಕಡೆ ಒಂದು ತಡವೆ ಬಾಗಿ ನೋಡಿದಳು. ಒಳಮನೆ ಖಾಲಿಯಾಗಿ ಹೋಗಿತ್ತು. ಮಿರ್ಜಾ ಬೇಗಮಳನ್ನು ಕಾಣಲು ಒಳಗೆ ಹೋದೊಡನೆಯೇ ಹಾಸಿನ ಮೇಲಿದ್ದ ಒಂದೆರಡು ಕಾಯಿಗಳನ್ನು ಅನುಮಾನ ತೋರದಂತೆ ಬದಲಾಯಿಸಿ, ದೂರದಲ್ಲಿ ಮೀರ್ ರೋಷನ್ ಆಲಿ ಮಿರ್ಜಾವಿನ ದಾರಿ ಕಾಯುತ್ತಿರುವವನಂತೆ ನಿಧಾನವಾಗಿ ತಿರುಗಾಡುತ್ತಿದ್ದ. ರೋಷನ್ ಆಲಿ ಹೊರಗಡೆಯಿದ್ದುದನ್ನು ತಿಳಿದು ಬೇಗಂ, ಚದುರಂಗದ ಹಾಸಿನ ಬಳಿಗೆ ಬಂದು, ಹಾಸನ್ನು ಮೊಗಚಿಹಾಕಿ ಆ ಕಾಯಿಗಳನ್ನು ಹೊರಗೆ ಬಿಸಾಡಿ ಬಂದುಬಿಟ್ಟಳು. ಕ್ರೋಧದಿಂದ ಕುದಿಯುತ್ತಾ ಬಾಗಿಲನ್ನು ಬಡಿಯುತ್ತಾ ಮರೆಯಾದ ಬೇಗಮಳನ್ನು ಕಂಡ ರೋಷನ್ ಆಲಿ, ಇನ್ನು ನಿಂತು ಫಲವಿಲ್ಲವೆಂದು ಅಲ್ಲಿಂದ ಹೊರಟುಬಿಟ್ಟನು.

"ನೀನು ಬಹಳ ಅನರ್ಥಮಾಡಿದೆ" ಎಂದು, ಮಿರ್ಜಾ ಬೇಗಮಳನ್ನು ಕುರಿತು ಹೇಳಿದ. "ಪುನಃ ರೋಷನ್ ಆಲಿ ಇಲ್ಲಿಗೆ ಬರಲಿ, ಹೊರದೂಡುವೆ. ನೀವು ಚದುರಂಗವನ್ನು ಪ್ರೀತಿಸುತ್ತಿರುವಷ್ಟೆ ದೇವರನ್ನು ಪ್ರೀತಿಸಿದ್ದರೆ, ದೇವತೆಯಾಗುತ್ತಿದ್ದಿರಿ. ಹಗಲೆಲ್ಲಾ ನೀವು ಆಟವಾಡುತ್ತೀರಿ. ನಾನು ಮಾತ್ರ ಅಡಿಗೆಮನೆಯಲ್ಲಿ ಬೇಯಿಸುತ್ತಾ ಬೇಸರದಿಂದ ಮನೆಗೆಲಸ ನೋಡಿಕೊಳ್ಳುತ್ತಿರುವೆ. ಈಗಲಾದರೂ ವೈದ್ಯರ ಬಳಿಗೆ ಹೋಗುವಿರೋ ಇನ್ನೂ ಮೊಂಡುತನ ಮಾಡುವಿರೋ!" ಎಂದು, ಬೇಗಂ ಮಿರ್ಜಾವನ್ನು ಆಟದ ಹಿಡಿತದಿಂದ ತಪ್ಪಿಸಿ ಕೆಲಸ ಹೇಳಿದಳು.

ಮಿರ್ಜಾ ಮನೆಯಿಂದ ಹೊರಬಿದ್ದ. ಅವನು ವೈದ್ಯರ ಬಳಿಗೆ ಹೋಗಲಿಲ್ಲ, ಮಿರ್ ರೋಷನ್ ಅಲಿಯ ಮನೆಗೆ ಬಂದ. ಬಂದವನು, ಮನೆಯಲ್ಲಿ ನಡೆದ ಪ್ರಕರಣವನ್ನೆಲ್ಲಾ ಸ್ನೇಹಿತನಿಗೆ ತಿಳಿಸಿದ. ಕಥೆಯನ್ನೆಲ್ಲಾ ಕೇಳಿ ಕಟ್ಟಕಡೆಗೆ ರೋಷನ್ ಆಲಿ, "ಕಾಯಿಗಳ ಎಸೆದಾಟವನ್ನು ಕಂಡೊಡನೆಯೇ ಬೇಗಂ ಕೋಪಗೊಂಡಿದ್ದಾಳೆಂದು ತಿಳಿದು ಮನೆಗೆ ಬಂದುಬಿಟ್ಟೆ. ಅದೆಂತಹ ಕೋಪವಪ್ಪಾ! ಅವಳಿಗೇ ಹೆಚ್ಚಿಗೆ ಸಲಿಗೆ ಕೊಟ್ಟುಬಿಟ್ಟಿರುವೆ. ಮನೆಗೆಲಸವೇ ಅವಳ ಹಕ್ಕು, ಹೊರಗಡೆ ನೀನು ಮಾಡುವ ಕೆಲಸಕ್ಕೆ ಅವಳ ಅಡ್ಡಿಯೇನು? ಏನಾದರೂ ಸರಿಯೆ, ಹೆಂಗಸರು ಇಂತಹ ಕೆಲಸಕ್ಕೆ ಪ್ರವೇಶಿಸಬಾರದು" ಎಂದ.

"ಹಾಗಿರಲಿ ರೋಷನ್, ಕೆಲಸಕ್ಕೆ ಬಾರದ ಮಾತುಗಳಿಂದೇನು? ಇನ್ನು ಮುಂದೆ ನಾವು ಗುಟ್ಟಾಗಿ ಆಡಲು ಸೇರುವ ಸ್ಥಳ ಎಲ್ಲಿ ಮಾಡಿಕೊಳ್ಳೋಣ" ಎಂದು ಕೇಳಿದ ಮಿರ್ಜಾ.

"ಅದಕ್ಕೆ ತೊಂದರೆಯೇನು? ನನ್ನ ಇಡೀಮನೆ ನಿನ್ನದೇ ಆಗಿದೆ. ಬಾ ಈಗಲೇ ಹಾಸನ್ನು ಬಿಚ್ಚಿ ಒಂದು ಆಟವಾಡೋಣ" ಎಂದು ರೋಷನ್ ಆಲಿ ಪುನಃ ಆಟವನ್ನಾರಂಭಿಸಿದ.

"ಬೇಗಂಳ ಕೋಪವನ್ನು ನಾನು ಹೇಗೆ ಶಮನಗೊಳಿಸುವುದು? ಮನೆಯಲ್ಲಿ ನಾವು ಸೇರಿದ್ದಾಗ ದಾಂದಲೆಯಾಯಿತಲ್ಲ. ಇಲ್ಲಿ ನಿನ್ನೊಡನೆ ಆಟಕ್ಕೆ ಕುಳಿತನೆಂದು ಅವಳಿಗೆ ತಿಳಿದರೆ ಸಾಕು, ನನ್ನನ್ನು ಜೀವಸಹಿತ ಹುರಿದುಬಿಡುತ್ತಾಳೆ" ಎಂದು ಮಿರ್ಜಾ ಭೀತಿಯಿಂದ ತಿಳಿಸಿದ.

"ಅವಳು ಕೂಗಾಡುವುದು ಕೂಗಾಡಲಿ. ನಾಲ್ಕೈದು ದಿನಗಳಲ್ಲಿ ಕೋಪವಿಳಿದು ಹೋಗುತ್ತದೆ. ಮಿರ್ಜಾ! ಹೇಗಾದರೂ ಆಗಲಿ ನೀನು ಮಾತ್ರ ಬೇಗಂಳು ಮುಂದೆ ಸ್ವಾತಂತ್ರ್ಯವಹಿಸಿ ಬರುವಷ್ಟು ಅವಕಾಶ ಕೊಡಬೇಡ. ನಿನ್ನ ಗೌರವಕ್ಕೆ ಕುಂದಕ ಬರಬಾರದು. ನಿನಗೆ ಅವಮಾನವಾಗದಂತೆ ಅವಳು ವರ್ತಿಸಬಾರದು" ಎಂದು ರೋಷನ್ ಆಲಿ ಮಿರ್ಜಾನಿಗೆ ಬುದ್ಧಿಹೇಳಿದ.

೨

ಏನೋ ಯಾವ ಕಾರಣಕ್ಕೋ ಬೇಗಂ ಮಿರ್ ರೋಷ್ಞ ಆಲಿ ಪತಿಯನ್ನು ಯಾವಾಗಲೂ ಬಹಳ ದೂರ ಇರಗೊಡುತ್ತಿದ್ದಳು. ಅವನು ಚದುರಂಗದಲ್ಲಿ ಉಳಿದು ದೂರವಾಗಿದ್ದಾಗಲೂ ಬೇಗಂ ಅವನನ್ನು ಅಡ್ಡಿಪಡಿಸುತ್ತಿರಲಿಲ್ಲ. ರೋಷ್ಞ ಆಲಿಯ ಸಂತೋಷಕ್ಕೆ ಪಾರವೇ ಇರಲಿಲ್ಲ. ತನ್ನ ಹೆಂಡತಿಗಿಂತಲೂ ಮಿಗಿಲಾದ ಒಳ್ಳೆಯವರು ಇಲ್ಲವೇ ಇಲ್ಲವೆಂದು ಹೆಮ್ಮೆಯಿಂದವನು ಹೇಳುತ್ತಿದ್ದ. ರೋಷ್ಞ ಆಲಿ ಚದುರಂಗದ ಹಾಸನ್ನು ಹಚ್ಚಿ ಮಿರ್ಜಾನಿನೊಡನೆ ಆಟಕ್ಕೆ ನಿತ್ಯವೂ ಕೂಡಲು ಪ್ರಾರಂಭಿಸಿದ ಮೇಲೆ ಬೇಗಂ ರೋಷ್ಞ ಆಲಿಯ ಸ್ವೇಚ್ಛಾವರ್ತನೆಗೆ ಅಡ್ಡಿಯಾಯಿತು. ಬೀದಿಯಲ್ಲಿ ಏನು ನಡೆಯುತ್ತಿದೆ, ಯಾರು ಯಾರು ಹೋಗುತ್ತಿದ್ದಾರೆ ಎಂದವಳು ದಿನವಹಿ ನೋಡುತ್ತಾ ಕೂಡುತ್ತಿದ್ದಳು ಸ್ಥಳಬಿಟ್ಟು ಕದಲದೆ ರೋಷ್ಞ ಆಲಿ ಆಟಕ್ಕೆ ಕೂತುಬಿಟ್ಟಮೇಲೆ, ಬೇಗಂಳಿಗೆ ಮಾತ್ರವಲ್ಲದೆ ಊಳಿಗದವರಿಗೂ ಉಪದ್ರವಕ್ಕೆ ಕಾರಣವಾಯಿತು. ನಿತ್ಯವೂ ಯಾವ ಮೂಲೆಯಲ್ಲಿಯೋ ನಿದ್ರಿಸುತ್ತಾ ಕಾಲಕಳೆಯುತ್ತಿದ್ದ ಸೇವಕರು, ರೋಷ್ಞ ಆಲಿಯ ಹೊಸ ಏರ್ಪಾಡನ್ನು ತಿಳಿದು ಗೊಣಗಾಟವಾಡಲಾರಂಭಿಸಿದರು. ಆಟಕ್ಕೆ ಕೂಡುತ್ತಿದ್ದ ರೋಷ್ಞ ಆಲಿ ಗಳಿಗೆಗೊಂದು ಸಾರಿ ಎಲೆಅಡಿಕೆಗೋ ಮತ್ತಾವುದಕ್ಕೋ ಸೇವಕರನ್ನು ಗಟ್ಟಿಯಾಗಿ ಕೂಗುತ್ತಾ ಅವರನ್ನು ಓಡಾಡಿಸುತ್ತಿದ್ದ. ಅವರು ತಾಳಲಾರದೆ "ಯಜಮಾನರ ಕರೆಗೆ ಓಡಿಓಡಿ ಕಾಲುಗಳು ಬಿದ್ದುಹೋಗುತ್ತಿವೆ. ಒಡೆಯರ ಇಚ್ಛೆಯಂತೆ ನಡೆಯುವುದು ನಮ್ಮ ಕರ್ತವ್ಯ. ಬೆಳಗಿನಿಂದ ಸಂಜೆಯವರೆಗೆ ಆಟ ನಡೆಯುತ್ತಲೇ ಇದುತ್ತದೆ. ಆಟಕ್ಕೆ ಕೂಡುವುದು ಅಪರಾಧ, ಅಲ್ಲದೆ ಚದುರಂಗವಾಡುವುದು ಶ್ರೇಯಸ್ಕರವಲ್ಲ. ಎಷ್ಟೋ ಜನರು ಆಟಕ್ಕೆ ಮರುಳಾಗಿ ಮನೆಮಾರು ಹಾಳು ಮಾಡಿಕೊಂಡಿದ್ದಾರೆ. ಮುಂದೇನೋ............?" ಎಂದು, ಭಯದಿಂದ ಬೇಗಂಳಲ್ಲಿ ಅರಿಕೆಮಾಡಿಕೊಂಡರು.

"ನೀವು ಹೇಳುವುದೆಲ್ಲಾ ನಿಜ. ಅವರಿಗೆ ಆಟದ ಮೇಲಣ ಪ್ರೀತಿಯನ್ನು ತಪ್ಪಿಸುವುದು ಹೇಗೆ? ಏನು ಮಾಡಿದರೂ ಅವರು ತೊರೆಯರಲ್ಲಾ" ಎಂದವಳು ಕೈಹಿಸುಕಿಕೊಂಡು ಪಶ್ಚಾತ್ತಾಪಪಟ್ಟಳು.

ಚದುರಂಗದ ಆಟ ಮನೆತನಕ್ಕೆ ಹಾನಿ, ಎಂಬ ಮಾತು ರೋಷನ್ ಆಲಿಯ ಮನೆಯವರು ಮಾತ್ರವಲ್ಲದೆ ನೆರೆಹೊರೆಯವರು ಸಹಾ ಆಡಲಾರಂಭಿಸಿದರು. ದೇಶದಲ್ಲಿ ಶ್ರೀಮಂತರು ಆಟಪ್ರಿಯರಾಗಿ ಕುಳಿತುಬಿಟ್ಟು ಕಾಲಹರಣಮಾಡುತ್ತಾ ಬಂದರೆ ಅದು ದೇಶಕ್ಷೋಭೆಯ ಸಂಕೇತವಲ್ಲದೆ ಮತ್ತೇನು?

ಆಗ ದೇಶಸ್ಥಿತಿಯೂ ಬಹಳ ಹೀನಾವಸ್ಥೆಯಲ್ಲಿತ್ತು. ಹಗಲುಹೊತ್ತಿನಲ್ಲಿ ಕಳವು, ಸುಲಿಗೆ, ದರೋಡೆಗಳು ನಿರ್ಭಯವಾಗಿ ನಡೆಯುತ್ತಿದ್ದವು. ಗ್ರಾಮದ ಸಂಪತ್ತೆಲ್ಲಾ ನಗರಕ್ಕೆ ಹರಿದಿತ್ತು. ರೈತರು ನಾನಾ ಪ್ರಮೋದಗಳಿಗೆ ಸಿಕ್ಕಿಬಿದ್ದು ಜೀನಾಯವನ್ನು ಮರೆತಿದ್ದರು. ಈಸ್ಟ್ ಇಂಡಿಯಾ ಕಂಪೆನಿಯ ಕೈವಾಡದಲ್ಲಿ ರಾಜ್ಯ ಸಿಕ್ಕಿಬಿತ್ತು. ಕಂಪೆನಿಯವರಿಗೆ ತೆತ್ತಬೇಕಾಗಿದ್ದ ಹಣದ ಮೊತ್ತ ಹುತ್ತದಂತೆ ಬೆಳೆಯುತ್ತಲಿತ್ತು. ಅಧಿಕಾರಿಗಳ ಆಲಸ್ಯವರ್ತನೆಯಿಂದ ರಾಜಾದಾಯವು ವಸೂಲಾಗದೆ ಬಹಳ ನಿಂತಿತ್ತು. ಹೀಗಾಗಿ ಕೋಶ ಬರಿದಾಗಿ, ಅಧಿಕಾರಸೂತ್ರ ಸಡಿಲವಾಗಿ ದೇಶದಲ್ಲೆಲ್ಲಾ ಕ್ಷೋಭೆ ಕಾಣಿಸಿಕೊಂಡಿತ್ತು. ಕೆಲವು ಶ್ರದ್ಧಾಳುಗಳಾದ ಭೂವನತಿಗಾರರು ರಾಜರನ್ನು ಎಚ್ಚರಿಸಿ ದೇಶ ಕ್ಷಯಿಸುತ್ತಿರುವ ವಿಚಾರವನ್ನು ಸೂಚಿಸಿದರು. ಏನಾದರೂ ಜನರಿಗೂ ಪ್ರಭುಗಳಿಗೂ ವಿವೇಕ ಬರಲೇಯಿಲ್ಲ

ರೋಷನ್ ಆಲಿ, ಮಿರ್ಜಾ ಚದುರಂಗದ ಹಾಸಿನ ಮುಂದೆ ತಪ್ಪದೆ ಕೂಡುತ್ತಿದರು. ಆಟ ನಡೆಯುತ್ತಿದ್ದಾಗ ಒಂದೊಂದು ತಡುವೆ, ಬಯ್ದಾಟ; ಅವಹೇಳನಗಳು, ಕಾದಾಟಗಳು ನಡೆಯುತ್ತಲಿದ್ದವು. ಕಪ್ಪು ಕವಿದು ಕತ್ತಲಾದರೂ ಆಟವನ್ನು ಬಿಟ್ಟು ಅವರು ದೂರವಾಗುತ್ತಿರಲಿಲ್ಲ. ತೀರ ಕತ್ತಲಾದಾಗ ಅವರವರು ಮನೆಯ ಕಡೆಗೆ ಮೊಗ ತಿರುಗಿಸುತ್ತಿದ್ದರು. ಅವರು ಮನೆ ಸೇರಿ ರಾತ್ರಿ ಕಳೆದಾಗ, ಹಿಂದಿನದಿನ ಆಡಿದ ಅವಾಚ್ಯ ನಿಂದ್ಯಾವಹೇಳನಗಳನ್ನು ಮರೆತುಬಿಟ್ಟು ಬರುತ್ತಿದ್ದರು. ಮಿರ್ಜಾ, ರೋಷನ್ ಆಲಿಯ ಮನೆಗೆ ಬಂದು ಪುನಃ ಆಟಕ್ಕೆ ಕೂಡುತ್ತಿದ್ದ. ಆಟದ ಹಾಸು ಹಾಸಿ, ಪುನಃ ಪುನಃ ಹೊಸ ಸಮಸ್ಯೆಗಳನ್ನು ಹೂಡಿ ಅವರಿಬ್ಬರೂ ಕೂಡುತ್ತಿದ್ದರು.

ಒಂದು ದಿನ, ನಡುಮಧ್ಯಾಹ್ನದ ಹೊತ್ತಿನಲ್ಲಿ ಆಟ ಬಹಳ ಬಿರುಸಿನಿಂದ ನಡೆಯುತ್ತಿದ್ದಾಗ, ಸೈನಿಕನೊಬ್ಬ ಕುದುರೆಯನ್ನೇರಿ ರೋಷ್ಞ ಆಲಿಯ ಮನೆಯ ಹತ್ತಿರಕ್ಕೆ ಬಂದ. ಅವನು ರೋಷ್ಞ ಆಲಿಯನ್ನು ಕುರಿತು "ಮಿರ್ಜಾ ಸಜ್ಜಾದ್ ಆಲಿಯ ಮನೆಯೆಲ್ಲಿದೆ?" ಎಂದು ಕೇಳಿದನು. ಚದುರಂಗಪ್ರಿಯರಿಗೆ ತಾವಾಡುತ್ತಿದ್ದ ಮಾತಿನಮೇಲೆ, ಗಮನವೇ ಇರಲಿಲ್ಲ. ಆಟದ ನಡುವೆ ಪ್ರವೇಶಿಸಿ ಬಂದಂತಹ ಶನಿಯಾವನಿವನೆಂದು, ತನಗೇನು ಸೈನಿಕನಿಂದ ಆಗಬೇಕಾಗಿರುವುದೆಂದು ಯೋಚಿಸುತ್ತಾ ರೋಷ್ಞ ಆಲಿ, ಸೇವಕನನ್ನು ಕರೆದು "ಹೊರಬಾಗಿಲು ಮುಚ್ಚಿಬಿಡು, ಮನೆಯಲ್ಲಿ ಯಜಮಾನನಿಲ್ಲವೆಂದು ಹೇಳಿ ಬಂದಿರುವವನನ್ನು ಕಳುಹಿಸಿಬಿಡು" ಎಂದು ಆಜ್ಞಾಪಿಸಿದನು.

ಸೈನಿಕ "ಒಡೆಯ ಮನೆಯಲ್ಲಿಲ್ಲದಿದ್ದಲ್ಲಿ ಮತ್ತೆಲ್ಲಿರುತ್ತಾನೆ?" ಎಂದು. ಕೇಳಿದ. ಸೇವಕನಿಗೂ ಸೈನಿಕನಿಗೂ ಕೆಲವುಕಾಲ ವಾದ ನಡೆಯಿತು.

"ಎಲ್ಲಿದ್ದಾನೋ ತಿಳಿಯದು. ನೀನೇಕೆ ಇಲ್ಲಿಗೆ ಬಂದಿರುವೆ" ಎಂದು ಸೇವಕ ಪ್ರಶ್ನಿಸಿದ.

ಸೈನಿಕ "ವಿಷಯವನ್ನು ನಿನ್ನೊಂದಿಗೆ ಹೇಳಲಾಗುವುದಿಲ್ಲ. ದೊರೆ ನಿಮ್ಮ ಒಡೆಯನಿಗೆ ಆಜ್ಞಾಪಿಸಿದ್ದಾನೆ. ಸೈನ್ಯಕ್ಕೆ ಸ್ವಲ್ಪಮಂದಿ ಬೇಕಾಗಿದ್ದಾರೆ. ಯುದ್ಧ ಸಂಭವಿಸುವ ಹಾಗಿದೆ. ಒಡೆಯನೂ ಸಿದ್ಧವಾಗಬೇಕು. ಆಗಲೇ ಅವನು ಗುತ್ತಿಗೆದಾರನ ಖಚಿತವಾದ ಬೆಲೆಯನ್ನು ತಿಳಿಯುವನು" ಎಂದು, ಹೇಳಿದ.

"ಆಗಬಹುದು. ನೀನು ತಂದಿರುವ ವಾರ್ತೆಯನ್ನು ಒಡೆಯನಿಗೆ ತಲುಪಿಸಲಾಗುವುದು" ಎಂದು, ಸೇವಕ ಹೊರಡುವುದರಲ್ಲಿದ್ದ.

"ವಾರ್ತೆ ಮುಟ್ಟಿಸಿದರಾಗದು, ಪುನಃ ನಾಳೆ ನಾನು ಇಲ್ಲಿಗೆ ಬರುವೆ; ನಿನ್ನ ಒಡೆಯನನ್ನು ರಾಜನ ಸಮ್ಮುಖಕ್ಕೆ ಎಳೆಯಬೇಕಾಗುತ್ತದೆ" ಎಂದು, ಹೇಳಿ ಸೈನಿಕ ಹೊರಟುಬಿಟ್ಟ.

ಸೈನಿಕನಿಗೂ ಸೇವಕನಿಗೂ ನಡೆದ ವಾಗ್ವಾದವನ್ನು ರೋಷ್ಞ ಆಲಿ ಮರೆಯಲ್ಲಿ ನಿಂತು ಕೇಳಿಸಿಕೊಂಡು, ನಡುಗುತ್ತಾ ಮಿರ್ಜಾವಿನ ಹತ್ತಿರಕ್ಕೆ

ಬಂದು ನಡೆದ ಸಮಾಚಾರವನ್ನು ತಿಳಿಸಿ "ಮುಂದೇನು?" ಎಂದು ಭಯದಿಂದ ಕುಳಿತುಕೊಂಡ.

ಒಳ್ಳೆಯ ಕಠಿಣಪರೀಕ್ಷೆಗೆ ಸಿಕ್ಕಿಕೊಂಡ ಹಾಗಾಯಿತು. ನನ್ನನ್ನು ರಾಜ ಕರೆಕಳುಹಿಸಬಹುದು, ನನಗೂ ಭಯವಾಗುತ್ತಿದೆ."

"ಸೈನಿಕ, ನಾಳೆ ಇಲ್ಲಿಗೆ ಪುನಃ ಬರುವನೆಂದು ಹೇಳಿ ಹೋಗಿದ್ದಾನೆ."

"ನಾವು ರಣಭೂಮಿಯಲ್ಲಿ ಸಾಯುವುದು ಖಂಡಿತವೆಂದು ತೋರುವುದು."

"ರಾಜನ ಕೈಗೆ ಸಿಕ್ಕದೆ ತಪ್ಪಿಸಿಕೊಳ್ಳಲು ಹಾದಿಯೂ ಒಂದಿದೆ. ನಾವು ಮನೆಯಲ್ಲಿರುವುದೇ ಬೇಡ. ಇನ್ನು ಮುಂದೆ ಆಟಕ್ಕೆ ಸ್ಥಳವನ್ನು ಗೋಮತಿ ತೀರದಲ್ಲಿ ಮಾಡಿಕೊಳ್ಳೋಣ. ಅಲ್ಲಿಗೆ ಯಾರೂ ನಮ್ಮನ್ನು ಹುಡುಕಿಕೊಂಡು ಬರುವುದಿಲ್ಲ. ಸೈನಿಕನು ನಮ್ಮನ್ನು ಕಾಣದೆ ಹಿಂದಿರುಗಬೇಕಾಗುವುದು" ಎಂದು, ಮಿರ್ಜಾ ಹೆದರುತ್ತಿದ್ದ ರೋರ್ಷ ಆಲಿಗೆ ಧೈರ್ಯ ಹೇಳಿದ.

"ಮಿರ್ಜಾ, ದೇವರ ದಯೆಯಿಂದ ಸುಲಭವಾದ ಉಪಾಯ ಸೂಚಿಸಿ ಪಾರುಮಾಡಿದೆ. ನೀನು ಹೇಳಿದಂತೆ ಅನುಸರಿಸದಿದ್ದರೆ ಮಾರ್ಗವೇ ಇಲ್ಲ" ಎಂದು, ರೋರ್ಷ ಆಲಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದ.

ಹೊರಗಡೆ ಬೇಗಂ ರೋರ್ಷ ಆಲಿ ಸೇವಕನಿಗೆ "ನೀನು ಚೆನ್ನಾಗಿ ಅವರನ್ನು ಬೆದರಿಸಿದೆ. ಈ ಚರ್ಯೆಯ ಜನರನ್ನು ನಾನು ಚೆನ್ನಾಗಿ ಕುಣಿಸಬಲ್ಲೆ. ಇವರ ಶಕ್ತಿ, ಸಾಮರ್ಥ್ಯ ಎಲ್ಲಾ ಚದುರಂಗ ಆಟದಲ್ಲಿ ಮುಳುಗಿ ಹೋಗುತ್ತಿದೆ. ನಾಳೆಯಿಂದ ಇವರು ಮನೆಯಲ್ಲಿ ಆಡಲು ಕೂರುವುದಿಲ್ಲ" ಎಂದು, ಇನ್ನು ತನ್ನ ಸ್ವಾತಂತ್ರ್ಯಕ್ಕೆ ಅಡ್ಡಿಯಿಲ್ಲವೆಂದು ಆನಂದಪಟ್ಟಳು.

೩

ಮರುದಿನದಿಂದ ಮಿರ್ಜಾ ಮತ್ತು ರೋರ್ಷ ಅಲಿ ಪ್ರಾತಃಕಾಲವೇ ಮನೆಬಿಟ್ಟು ಗೋಮತಿ ತೀರಕ್ಕೆ ಹೊರಡಲಾರಂಭಿಸಿದರು. ಒಂದು ಸಣ್ಣ ಜಮಖಾನೆ, ಒಂದು ಪೆಟ್ಟಿಗೆಯ ತುಂಬಾ ಎಲೆಅಡಿಕೆಯನ್ನು ಜತೆಯಲ್ಲಿ ತರುತ್ತಿದ್ದರು. ಮುರುಕು ಮಂಟಪವಾಗಿದ್ದ ಒಂದು ಪುರಾತನ ಮಸೀದಿ

ಈ ಆಟಪ್ರಿಯರಿಗೆ ಗೊತ್ತಾದ ಸ್ಥಾನವಾಯಿತು. ಈ ಮುರುಕು ಮಸೀದಿ, ಪುರಾತನವಾದದ್ದು. ನವಾಬ್ ಅಸಫ್‌ದ್ದುಲ್ಲಾ ಕಟ್ಟಿಸಿದುದು. ತಂಬಾಕು ಮತ್ತು ಧೂಮ್ರಪಾನಕ್ಕೆ ಅನುಕೂಲಮಾಡಿಕೊಂಡೇ ಆಟಗಾರರು ನಿತ್ಯವೂ ಬರುತ್ತಿದ್ದರು. ಮಸೀದಿಯಲ್ಲಿ ಆಟಕ್ಕೆ ಕೂತೊಡನೆಯೇ ಹೊರಪ್ರಪಂಚವು ಇವರಿಗೆ ಕಾಣಿಸದಂತೆ ಮಾಯವಾಗಿತ್ತು. ಆಟಕ್ಕೆ ಕೂತಾಗ ಮಾತನಾಡದೆ, ತುಟಿ ಅಲ್ಲಾಡಿಸದೆ ಹೊತ್ತುಕಳೆಯುತ್ತಿದ್ದ ಲೋಲರ ಬಾಯಿಂದ ಯಾವಾಗ ಲಾದರೊಮ್ಮೆ "ತಡೆಯಾಯಿತು, ಗತವಾಯಿತು" ಎಂದು, ಆಟದ ಸಂಜ್ಞೆಯ ಮಾತುಗಳು ಹೊರಬೀಳುತ್ತಿದ್ದವು. ಹಸಿವು ಇವರನ್ನು ಅಷ್ಟಾಗಿ ಪೀಡಿಸು ತ್ತಿರಲಿಲ್ಲ. ಇವರು ನಿಜವಾಗಿ ಯೋಗಿಗಳಿಗಿಂತಲೂ ಯೋಗಿಗಳೇ ಎನಿಸಿ ದ್ದರು. ನಡುಮಧ್ಯಾಹ್ನ ವೇಳೆಯಲ್ಲಿ ದೂರದಲ್ಲಿ ಮಾರಾಟಕ್ಕೆ ಇಟ್ಟು ಕೊಂಡಿದ್ದ ರೊಟ್ಟಿಯನ್ನು ಕೊಂಡು, ಹೊಟ್ಟೆಯ ಪೂರೈಕೆ ಮುಗಿಸಿ, ಒಂದೆರಡು ಸಾರಿ ಬತ್ತಿಯನ್ನೆಳೆದು ಹಾಸಿನ ಮುಂದೆ ದೀರ್ಘವಾಗಿ ಆಟಕ್ಕೆ ಕೂಡುತ್ತಿದ್ದರು.

ರಾಜಕೀಯವೂ ಅಷ್ಟೆ, ಸೂತ್ರಗಳೆಲ್ಲಾ ಕಡಿದು ಕ್ಷೀಣ ಕ್ಷೀಣವಾಗು ತ್ತಿತ್ತು. ಈಸ್ಟ್ ಇಂಡಿಯಾ ಕಂಪೆನಿಯವರು, ಸೈನ್ಯವನ್ನು ಲಕ್ನೋ ನಗರ ಮುಖಾಂತರ ಸಾಗುತ್ತಿದ್ದರು. ಜನರು ಭೀತಿಯಿಂದ ದಿಕ್ಕುಗೆಟ್ಟು ಹೋಗಿ ದ್ದರು. ಗಲಭೆಯಾಗುವುದು ಖಚಿತವೆಂದು ಪಟ್ಟಣಿಗರು ಹಳ್ಳಿಯ ಕಡೆಗೆ ಓಡುತ್ತಿದ್ದರು. ಏನಾದರೇನು? ಚದುರಂಗಪ್ರಿಯರು ಯಾವುದಕ್ಕೂ ಗಮನಕೊಡದೆ ಸಂಜೆಯವರೆಗೆ ಗೋಮತಿ ತೀರದಲ್ಲಿ ಕಾಲಕಳೆದು, ಕತ್ತ ಲಾದನಂತರ ಸಂದುಗೊಂದುಗಳನ್ನು ಬಳಸಿ ಮನೆ ಸೇರಿಬಿಡುತ್ತಿದ್ದರು. ಸೈನಿಕನು ಕಣ್ಣಿಗೆ ಬಿದ್ದಾನೆಂದು ಕಳ್ಳರಂತೆ ಕತ್ತಲೆಯಲ್ಲಿ ತಲೆಮರೆಸಿಕೊಂಡು ಮನೆ ಸೇರಿಕೊಳ್ಳುತ್ತಿದ್ದರು.

ಒಂದು ದಿನ ಆಟದಲ್ಲಿ ರೋಷ್ವ ಆಲಿಯ ಕೈಮೇಲಾಗಿತ್ತು. ಮಿರ್ಜಾ ಸೋಲಿನ ಇಳಿತದಲ್ಲಿದ್ದು ಕಾಯಿಗಳನ್ನು ನಡೆಸುತ್ತಿದ್ದ. ಆಗ ದೂರದಲ್ಲಿ ಕಂಪೆನಿಯ ಸೈನಿಕರು ಬರುತ್ತಿರುವುದಾಗಿ ಕಂಡುಬಂತು. ಅವರು ಲಕ್ನೋ ನಗರಾಭಿಮುಖವಾಗಿ ಹೊರಟು ನಗರವನ್ನೂ ರಾಜ್ಯವನ್ನೂ ಕೈವಶಮಾಡಿ ಕೊಳ್ಳಲು ಹೋಗುತ್ತಿದ್ದರು.

"ದೇವರೇ ಸಹಾಯಮಾಡಬೇಕು, ಸೈನ್ಯ ನಗರದ ಕಡೆಗೆ ನುಗ್ಗು ತ್ತಿದೆ" ಎಂದು ಸೈನಿಕರನ್ನು ಕಂಡ ರೋಷ್ಣ ಆಲಿ ಕೂಗಿಕೊಂಡ. ಮಿರ್ಜಾ ಆಟಮಗ್ನನಾಗಿದ್ದವನು ಕೂಗಿಗೆ ಬೆದರದೆ ಕಾಯಿಗಳ ಕಡೆಗೆ ನೋಡುತ್ತಿದ್ದ.

"ಅವರು ನುಗ್ಗುತ್ತಿದ್ದರೆ ನುಗ್ಗಲಿ. ನೀನು, ನಿನ್ನ ಕಾಯಿಗಳನ್ನು ಭದ್ರವಾಗಿ ನೋಡಿಕೋ" ಎಂದ.

"ಮಿರ್ಜಾ ನಾವು ಇಲ್ಲಿ ಕಾಣುತ್ತಿರುವ ಪೊದೆಯಲ್ಲಿ ಅಡಗಿಕೊಂಡು ಕೂಡೋಣ" ಎಂದು, ಭಯದಿಂದ ರೋಷ್ಣ ಆಲಿ ಹೇಳಿದ.

"ಅದೆಲ್ಲಾ ಏಕೆ? ನಿನ್ನ ಕಾಯಿಗಳ ಕಡೆಗೆ ಲಕ್ಷ್ಯವಿಡು, ಇಗೋ ನಾನು ಇನ್ನೊಂದು ಮನೆ ನಡೆಸಿಬಿಟ್ಟರಾಯಿತು, ಸೋಲುವೆ" ಎಂದು, ಮಿರ್ಜಾ ಸ್ಮೃತಿಯಿಲ್ಲದೆ ಮಾತನಾಡಿದ.

"ಸೈನಿಕರು ಐದು ಸಾವಿರ ಜನರಿದ್ದಹಾಗಿದೆ. ಯುದ್ಧ ನಡೆಯು ವಂತಿದೆ. ಅಲ್ಲದೆ, ಫಿರಂಗಿಗಳೊಡನೆ ಹೋಗುತ್ತಿದ್ದಾರೆ" ಎಂದು ಭಯ ಭ್ರಾಂತಿಯಿಂದ ರೋಷ್ಣ ಆಲಿ ನುಡಿಯುತ್ತಿದ್ದ.

"ಸೋಲತಕ್ಕವರು ನಿನ್ನ ಹಾಗೆಯೇ ಆಡಿ ತಪ್ಪಿಸಿಕೊಳ್ಳುವುದನ್ನು ನಾನು ಕಂಡಿದ್ದೇನೆ" ಎಂದು ಮುಂದೆ ಒದಗಬಹುದಾದ ಗಂಡಾಂತರವನ್ನು ಸ್ವಲ್ಪವೂ ಲೆಕ್ಕಿಸದ ಮಿರ್ಜಾ ರೋಷ್ಣ ಆಲಿಯನ್ನು ಜರಿಯತೊಡಗಿದ.

"ನೀನು ಬಹಳ ಧೈರ್ಯಶಾಲಿ! ನಗರ ಕುತ್ತಿಗೆ ಸಿಕ್ಕಿದೆ. ಇನ್ನೂ ನೀನು ಸ್ಮೃತಿಯಿಲ್ಲದೆ ಆಟದ ಮಮತೆಯಲ್ಲಿದ್ದೀಯೆ. ನಗರವನ್ನು ಅವರು ಪೂರಾ ಹಿಡಿದಲ್ಲಿ, ನಾನೂ ನೀನೂ ಮನೆ ಸೇರಿಕೊಳ್ಳಲಾರವೆಂಬುದನ್ನು ತಿಳಿಯೆಯಾ? ಎಂದು ರೋಷ್ಣ ಆಲಿ ಎಚ್ಚರಿಸಿದ.

"ಮನೆಗೆ ಹೋಗುವ ವೇಳೆ ಬಂದಾಗ ಆ ಮಾತು. ಆಟದ ಕಡೆಗೆ ದೃಷ್ಟಿಯಿಡು. ನೀನು ಖಂಡಿತವಾಗಿ ಸೋಲುವೆ" ಎಂದ ಮಿರ್ಜಾ. ಏನಾದರೂ ರೋಷ್ಣ ಆಲಿ ಮಿರ್ಜಾವನ್ನು ಆಟಬಿಟ್ಟು ಕದಲಿಸಲಾರದೆ ಹೋದ.

ಸೈನಿಕರು ಆಟಗಾರರಿಂದ ಬಹುದೂರವಾಗಿ ಹೊರಟುಹೋದರು. ಆಗ ಹತ್ತು ಘಂಟೆಯ ಸಮಯ. ಇಬ್ಬರೂ ಸ್ನೇಹಿತ ಆಟಗಾರರು ನಡೆದು ದನ್ನೆಲ್ಲಾ ಮರೆತು ಪುನಃ ಆಟಕ್ಕೆ ಕುಳಿತುಬಿಟ್ಟರು.

ಸ್ವಲ್ಪ ಹೊತ್ತಾದನಂತರ "ನಮಗೆ ಈ ದಿನ ಆಹಾರವೆಲ್ಲಿ ಸಿಗುವುದು? ನಿನಗೆ ಹಸಿವಾಗುವುದಿಲ್ಲವೇನು?" ಎಂದು ಮಿರ್ಜಾ ರೋಷನ್ ಆಲಿಯನ್ನು ಪ್ರಶ್ನಿಸಿದ.

ಇನ್ನೂ ಭಯಭೀತನಾಗಿದ್ದ ರೋಷನ್ ಆಲಿ "ನನಗೆ ಹಸಿವೇ ಆಗದು, ಈ ಹೊತ್ತಿನಲ್ಲಿ ನಗರದಲ್ಲೇನು ನಡೆಯುತ್ತಿದೆಯೋ?" ಎಂದ.

"ಏನೂ ನಡೆಯುತ್ತಿಲ್ಲ. ನಿತ್ಯದಂತೆ ಜನರು ಊಟ ಮುಗಿಸಿ ಮಧ್ಯಾಹ್ನದ ವಿಶ್ರಾಂತಿ ಪಡೆಯುತ್ತಿರುತ್ತಾರೆ. ನವಾಬನೂ ಈ ಹೊತ್ತಿನಲ್ಲಿ ಮೋದದ ಮಹಲಿನಲ್ಲಿರುತ್ತಾನೆ" ಎಂದ ಮಿರ್ಜಾ.

ಆಟಗಾರರು ಮಧ್ಯಾಹ್ನ ಮೂರರವರೆಗೂ ಆಡುತ್ತಲೇಯಿದ್ದರು. ಮಿರ್ಜಾ ಸೋಲುತ್ತಲೇಯಿದ್ದ. ಹೊತ್ತು ಸೂಚಿಸುವ ಠಾಣೆಯವರು ನಾಲ್ಕು ಬಡೆದು ಮುಗಿಸಿದ್ದರು. ನಾಲ್ಕು ಘಂಟೆಯಾದನಂತರ ನಗರದಿಂದ ಹಿಂದಿರುಗಿಬರುತ್ತಿದ್ದ ಇಂಗ್ಲಿಷ್ ಸೈನಿಕರ ಕಾಲಿನ ಸಪ್ಪಳ ಕೇಳಿಬರುತ್ತಿತ್ತು. ಅವರ ಕೈಗೆ ಸಿಕ್ಕಿದ ನವಾಬ್ ವಾಜೀದ್ ಆಲಿಯನ್ನು ಸೆರೆಯಾಳಾಗಿ ಎಲ್ಲಿಗೋ ಒಯ್ಯುತ್ತಿದ್ದರು. ಗಲಭೆಯಾಗಲೀ ಕೂಗಾಗಲೀ ಯಾವುದೂ ನಗರದ ಕಡೆಯಿಂದ ಕೇಳಿಬರುತ್ತಿರಲಿಲ್ಲ. ಗುಂಡಿನಮಳೆ ಸುರಿಸದೆ, ಯಾರಿಗೂ ನೋಯಿಸದೆ, ರಕ್ತ ಚೆಲ್ಲದೆ ರಾಜ್ಯಾಕ್ರಮಣ ನಡೆದು ಹೋಯಿತು. ಯುದ್ಧ ನಡೆಯಲಿಲ್ಲ. ಹೇಡಿಜನರು ರಾಜನನ್ನು ಇಂಗ್ಲಿಷರಿಗೆ ಒಪ್ಪಿಸಿದ್ದರು. ಔದ್ ನವಾಬನನ್ನು ಇಂಗ್ಲಿಷರು, ಅವನ ಪ್ರಜೆಗಳು ಮೋದದಲ್ಲಿರುವಾಗಲೇ ಸೆರೆಹಿಡಿದು ಕರೆದುಕೊಂಡು ಹೋಗುತ್ತಿದ್ದರು. ಈ ವರ್ತನೆ ರಾಜಕೀಯ ಅಧಃಪತನವಲ್ಲವೆ?

ಸ್ಮೃತಿ ತಪ್ಪಿ ಮಾತನಾಡುತ್ತಿದ್ದ ಮಿರ್ಜಾ "ಶತ್ರುಗಳು ನವಾಬನನ್ನು ಸೆರೆಹಿಡಿದು ಒಯ್ದಿದ್ದಾರೆ" ಎಂದ.

ಮಿರ್ ರೋಷನ್ ಆಲಿ "ನಾನು ಕಾಯಿ ನಡೆಸಿರುವೆ" ಎಂದ.

ಮಿರ್ಜಾ "ನಿಲ್ಲು, ನಿಲ್ಲು, ಈ ಹೊತ್ತಿನಲ್ಲಿ ಆಟದ ಕಡೆಗೆ ನಾನು ಗಮನವೀಯಲಾರೆ. ನವಾಬ ಈ ಹೊತ್ತಿನಲ್ಲಿ ಕಣ್ಣೀರು ಸುರಿಸುತ್ತಿರಬಹುದು" ಎಂದ.

ರೋಷನ್ ಆಲಿ "ಅವನಿಗೆ ಇನ್ನು ಸುಖವೆಲ್ಲಿ, ಸೆರೆಯಾಳಾಗಿ ಹೋಗಿದ್ದಾನೆ" ಎಂದ.

"ಏನೋ ನಡೆದುಹೋಯಿತು, ನೆನೆಸಿದರೆ ಭಯವಾಗುತ್ತದೆ" ಎಂದ ಮಿರ್ಜಾ

"ನೀನು ಆಟದಲ್ಲಿ ಸಿಕ್ಕಿಬಿದ್ದಿದ್ದೀಯೆ. ನಾನು ಈಗ ನಡೆಸಿದರೆ ತೀರಿತು, ಖಂಡಿತವಾಗಿಯೂ ತಪ್ಪಿಸಿಕೊಳ್ಳಲಾರೆ" ಎಂದ ರೋಷನ್.

"ಅಯ್ಯೋ! ನೀನೆಂತಹ ಹೃದಯವಿಲ್ಲದ ಪ್ರಾಣಿ. ಕಠಿಣ ಪರಿಸ್ಥಿತಿಯಲ್ಲಿಯೂ ನಿನ್ನ ಮನಸ್ಸು ಮರುಗುವುದಿಲ್ಲವಲ್ಲಾ! ಅಯ್ಯೋ! ನಿರ್ಭಾಗ್ಯ ವಾಜಿದ್ ಆಲಿಷಹಾ!" ಎಂದು ಮಿರ್ಜಾ ಚೀತ್ಕಾರ ಮಾಡಿದ.

"ನೀನು ಮೊದಲು ನಿನ್ನ ಚದುರಂಗದ ರಾಜನನ್ನು ಉಳಿಸಿಕೋ. ಔದ್ ರಾಜನನ್ನು ಆಮೇಲೆ ನೆನೆದು ದುಃಖಪಡುವಂತೆ" ಎಂದು, ಆಟವಾಡುವಂತೆ ರೋಷನ್ ಆಲಿ ಪ್ರೇರೇಪಿಸಿದ.

ನವಾಬನನ್ನು ಸೈನಿಕರು ಒಯ್ದ ಮೇಲೆ ಆಟಗಾರರು ಬಹಳ ಮಾತನಾಡಿ ಅನುತಾಪ ತೋರಿದರಷ್ಟೆ. ಸೆರೆಯ ಚಿತ್ರವನ್ನು ನೆನೆದು ಮರೆಯುವುದು ಅವರಿಗೆ ಅಸಾಧ್ಯವಾಯಿತು. ದುಃಖ ಮರೆಯಲು ಪುನಃ ಅವರು ಹಾಸು ಹಾಸಿ ಆಟಕ್ಕೆ ಕುಳಿತುಬಿಟ್ಟರು. ಆಗ ಮಿರ್ ರೋಷನ್ ಆಲಿ "ಬಾ, ರಾಜನಿಗೆ ಶಾಂತಿ ಸಮಾಧಾನ ದೊರೆಯಲೆಂದು ದೇವರನ್ನು ಪ್ರಾರ್ಥಿಸುವಾ" ಎಂದು ಕರೆದ. ಅಂದಿನ ಆಟದಲ್ಲಿ ತಾನು ಹೆಚ್ಚಾಗಿ ಸೋತಿದ್ದರಿಂದ ಮಿರ್ಜಾವಿನ ಮನಸ್ಸು ನೆಮ್ಮದಿಯಲ್ಲಿರಲಿಲ್ಲ. ತಾನು ಸೋತನೆಂದು, ಮುಯ್ಯಿ ತೀರಿಸಿಕೊಳ್ಳಬೇಕೆಂದು ಅವನು ಹಾತೊರೆಯುತ್ತಲೇಯಿದ್ದ.

೪

ಸಂಜೆಯಾಯಿತು. ಶಿಥಿಲವಾದ ಮಸೀದಿಯಲ್ಲಿ ಬಾವಲಿಗಳು ಬಿರುಕಿನಲ್ಲಿ ಅಡಗಿಕೊಂಡು ಗದ್ದಲಮಾಡತೊಡಗಿದವು. ಆಟಪ್ರಿಯರು ಕದಲದೆ ಆಡುತ್ತಲೇಯಿದ್ದರು. ಇಬ್ಬರು ಯೋಧರು ಪರಸ್ಪರ ಕಾದಾಡಿ ರಕ್ತದ ಕಾಲುವೆ ಹರಿಸುವುದಕ್ಕೆ ಹಾತೊರೆಯುವಂತೆ, ಒಬ್ಬರನ್ನೊಬ್ಬರು ಸೋಲಿ

ಸಲು ಎಚ್ಚರಿಕೆಯಿಂದ ಆಡುತ್ತಿದ್ದರು. ಮಿರ್ಜಾ ಮೂರುಬಾರಿ ಆಟದಲ್ಲಿ ಒಂದೇ ಸಮನೆ ಸೋತುಬಿಟ್ಟ. ನಾಲ್ಕನೆಯ ಆಟ ಪ್ರಾರಂಭವಾಗಿತ್ತು. ಈ ಆಟದಲ್ಲಿಯೂ ಓಟ ಸೋಲುಮುಖವಾಗಿತ್ತು. ಏನೇ ಆಗಲಿ ಈ ಬಾರಿ ತಾನು ಗೆಲ್ಲಲೇಬೇಕೆಂಬ ಛಲದಿಂದ ಅವನು (ಮಿರ್ಜಾ) ಕಾಯಿಗಳನ್ನು ನಡೆಸುತ್ತಿದ್ದ. ಆದರೆ, ತಪ್ಪುಮಾರ್ಗದಲ್ಲಿ ಕಾಯಿಗಳನ್ನು ನಡೆಸುತ್ತಿದ್ದುದರಿಂದ ಮಿರ್ಜಾ ಮುಗ್ಗರಿಸುತ್ತಿದ್ದ. ರೋರ್ಷ ಆಲಿ ಈ ಬಾರಿಯೂ ಅವನನ್ನು ಸೋಲಿಸುವೆನೆಂಬ ಹೆಮ್ಮೆಯಿಂದ ಕೈತಟ್ಟುತ್ತಾ ಹಾಡುತ್ತಿದ್ದ. ಅವನ ಆನಂದಕ್ಕೆ ಮಿತಿಯೇ ಇರಲಿಲ್ಲ. ಈ ಆಟದಲ್ಲಿ ತಾನು ಗೆದ್ದುದೇ ಆದರೆ ಗುಪ್ತನಿಧಿಯೊಂದು ತನಗೆ ಕೈವಶವಾಗುವುದೆಂದು ಅವನು ಹಿಗ್ಗುತ್ತಿದ್ದ. ಈ ಸಂತೋಷ ಸಂಭ್ರಮವನ್ನು ನೋಡಿದ ಮಿರ್ಜಾ ಉದ್ರೇಕಗೊಂಡಿದ್ದ. ಮಿರ್ಜಾನ ಸಹನೆ ಮೀರಿತು. ತಾನು ಸೋಲುವುದು ಖಚಿತವೆಂದು ತಿಳಿದಮೇಲೆ ಕೋಪಗೊಂಡು "ಆಗಿಂದಾಗ್ಗೆ ಕಾಯಿಗಳನ್ನೇಕೆ ಸ್ಥಳಪಲ್ಲಟ ಮಾಡುತ್ತೀಯೆ? ಆಟದ ವಿಧಾನವೇಕೆ ಬದಲಾಯಿಸುವುದು" ಎಂದು, ಕೂಗಿಕೊಂಡ.

"ನೀನು ಸ್ವಲ್ಪ ಎಚ್ಚರಿಕೆಯಿಂದ ಕಾಯಿಗಳನ್ನು ನಡಿಸುದಾದರೆ ಒಳ್ಳೆಯದು. ಕಾಯಿಗಳನ್ನೇಕೆ ತಡೆದು ನಿಲ್ಲಿಸಿರುವೆ?" ಎಂದ ರೋರ್ಷ ಆಲಿ.

"ನೀನು ಗಂಟೆಗೊಂದು ಕಾಯಿ ನಡಿಸುವೆ. ಐದು ನಿಮಿಷಕ್ಕೆ ಹೆಚ್ಚು ಕಾಲ ತೆಗೆದುಕೊಂಡಲ್ಲಿ ನಡೆಯದು" ಎಂದ ಮಿರ್ಜಾ. ಅಲ್ಲದೆ, ತಾನು ಸೋಲುವುದನ್ನರಿತು ಯಾವುದೋ ತಂತ್ರದಿಂದ ಒಂದು ಕಾಯಿಯನ್ನು ಹಿಂದಕ್ಕೆ ಒಂದು ಮನೆ ನಡೆಸಿಬಿಟ್ಟ.

"ನೀನು ಕಾಯಿ ನಡೆಸಿದುದಾಯಿತು" ಎಂದ ಮಿರ್ಜಾ.

"ನೀನು ಕಾಯಿ ನಡೆಸುವುದಕ್ಕೆ ಆಸ್ಪದ ಕೊಡುವುದಿಲ್ಲ" ಎಂದ ರೋರ್ಷ ಆಲಿ.

"ನೀನು ಸೋಲುವೆಯೆಂದು ತಿಳಿದು ಮೋಸದ ಆಟ ಪ್ರಾರಂಭಿಸಿದೆಯಾ?" ಎಂದ ಮಿರ್ಜಾ

"ಮೋಸದ ಆಟ ಆಡುತ್ತಿರುವುದು ನೀನು – ನಾನಲ್ಲ. ಗೆಲ್ಲುವುದು, ಸೋಲುವುದು ಅದೃಷ್ಟಮಾತ್ರದಿಂದಲೇ. ಜಗಳ ಅಥವಾ ತಂತ್ರದಿಂದ ಏನೂ ನಡೆಯುವುದಿಲ್ಲ" ಎಂದ ರೋಷನ್ ಆಲಿ.

"ನೀನು ಈ ಆಟದಲ್ಲಿ ಸೋತೆ" ಎಂದ ಮಿರ್ಜಾ.

"ಹೇಗೆ?" ಎಂದು ಕೇಳಿದ ರೋಷನ್ ಆಲಿ.

"ಹಾಗಾದರೆ ಹಿಂದಿಟ್ಟುಕೊಂಡಿರುವ ಕಾಯನ್ನು ಇದ್ದ ಸ್ಥಳದಲ್ಲಿಯೇ ಇಡು" ಎಂದು ಕೂಗಿದ ಮಿರ್ಜಾ.

"ನಾನು ಇಡುವುದಿಲ್ಲ" ಎಂದು ಹಠದಿಂದ ರೋಷನ್ ಆಲಿ ಹೇಳಿದ.

"ಇಟ್ಟೇ ಇಡಬೇಕು" ಮಿರ್ಜಾ ಬಲಾತ್ಕಾರದಿಂದ ಹೇಳಿದ.

ಜಗಳವೆದ್ದು ಹೆಚ್ಚಾಯಿತು. ಉದ್ರೇಕಗೊಂಡ ಇಬ್ಬರೂ ಬಾಯಿ ತುಂಬಾ ಹೊಲಸುಮಾತುಗಳನ್ನು ಆಡಿದರು. ಮಿರ್ಜಾ ರೋಷನ್ ಆಲಿಯನ್ನು ನೋಡುತ್ತಾ ಕೋಪದಿಂದ "ನಿನ್ನ ಹಿರಿಯರು ಚದುರಂಗದ ಆಟ ಆಡಿರಲಿಲ್ಲ. ನಿನಗೆ ಹೇಗೆ ಆಟದ ನಿಯಮಗಳು ಗೊತ್ತಾಗುವುದು? ಅವರೆಲ್ಲಾ ಹುಲ್ಲು ಕೆತ್ತುವವರಾಗಿದ್ದರು. ನಿನಗೆಲ್ಲ ಆಟದ ತಂತ್ರ ಗೊತ್ತಿದೆ? ಸಂಸ್ಕೃತಿ, ವಿನಯ ಒಮ್ಮೆಯೇ ಮನುಷ್ಯನಿಗೆ ಬರಲಾರದು. ಬರೀ ಜಮೀನು ಗೊತ್ತುವಳಿಗೆ ಸಿಕ್ಕಿತೆಂದು ಯಾರೂ ಸಂಸ್ಕೃತ ಜನರಾಗಲಾರರು" ಎಂದು ಟೀಕೆ ಮಾಡಿದ.

ಪ್ರತಿಯಾಗಿ ಮಿರ್ ರೋಷನ್ ಆಲಿ "ನಿನ್ನ ಹಿರಿಯರು ಹುಲ್ಲು ಕೆತ್ತುವ ಜನರಾಗಿದ್ದಿರಬಹುದು. ನಮ್ಮಲ್ಲಿ ಹಿಂದಿನಿಂದಲೂ ಚದುರಂಗವಾಡುವ ಪದ್ಧತಿಯಿತ್ತು" ಎಂದ.

ಮಿರ್ಜಾ "ನೀನು ನನ್ನ ಜೀವಿತವನ್ನೆಲ್ಲಾ ಗಾಸಿ ಉದ್ದೀನ್ ಹೈದರನಿಗೆ ಅಡಿಗೆ ಬೇಯಿಸುವುದರಲ್ಲಿ ಕಳೆದೆ. ಈಗ ದೊಡ್ಡ ಗೊತ್ತುವಳಿದಾರನೆಂದು ಸೋಗುಹಾಕುತ್ತಿರುವೆ. ನಯ, ನಮ್ರತೆಯನ್ನು ಸುಲಭವಾಗಿ ಗಳಿಸಿಕೊಳ್ಳುವುದಕ್ಕಾಗುವುದಿಲ್ಲ ತಿಳಿದೆಯಾ?" ಎಂದು ಕೆರಳಿ ಮಾತನಾಡಿದ.

ಮಿರ್ ರೋಷನ್ ಆಲಿ "ನಮ್ಮ ಹಿರಿಯರ ಬಾಳ್ವೆಯನ್ನು ನೆನೆಸಿ, ಕಳಂಕವನ್ನೇಕೆ ಹಚ್ಚುತ್ತೀಯೆ? ಅವರು ಏನಾದರೂ ಆಗಿರಲಿ, ನಾವೆಲ್ಲಾ

ರಾಜನ ಸಹಪಾಠಿಗಳಾಗಿದ್ದು ಆಟ–ತಿಂಡಿ ವೇಳೆಯಲ್ಲಿರುತ್ತಿದ್ದುದು ನಿಜ" ಎಂದ.

ಮಿರ್ಜಾ "ಸುಳ್ಳನ್ನೇಕೆ ನುಡಿಯುತ್ತೀಯೆ? ಒಡಾಯಿಖೋರ" ಎಂದು ಕೂಗಿಕೊಂಡ.

ಮಿರ್ ರೋಷನ್ ಆಲಿ "ಎಚ್ಚರಿಕೆಯಿಂದ ಮಾತನಾಡು, ಇಂತಹ ಅವಹೇಳನವನ್ನು ನಾನು ಸಹಿಸೆ. ನನ್ನನ್ನು ಹೀಗೆ ಅವಮಾನಪಡಿಸುವವನ ಕಣ್ಣನ್ನು ಕೀಳಿಸಿಬಿಡುವೆ" ಎಂದ.

ಮಿರ್ಜಾ "ನನ್ನ ಸಾಮರ್ಥ್ಯ ತಿಳಿಯಬೇಕೆನ್ನುತ್ತೀಯಾ? ಬಾ ನಾವಿಬ್ಬರೂ ಕಾದಾಡೋಣ" ಎಂದು ಕದನಕ್ಕೆ ಆಹ್ವಾನಿಸಿದ.

"ನಾನೆಂದಿಗೂ ಇಂತಹ ಗೊಡ್ಡು ಬೆದರಿಕೆಗೆ ಹೆದರುವುದಿಲ್ಲ" ಎಂದು ರೋಷನ್ ಆಲಿ ಕಾದಾಟಕ್ಕೆ ಕತ್ತಿಹಿರಿದು ನಿಂತ.

ಇಬ್ಬರೂ ಕತ್ತಿಹಿಡಿದು ನಿಂತುಬಿಟ್ಟರು ಆಗಿನ ಕಾಲದಲ್ಲಿ ಯೋಧರು ತಮ್ಮ ನಡುವಿನಲ್ಲಿಯೇ ಕತ್ತಿಯನ್ನು ನೇತುಹಾಕಿಕೊಳ್ಳುತ್ತಿದ್ದರು, ಮಿರ್ಜಾ ಮತ್ತು ರೋಷನ್ ಆಲಿ ಕತ್ತಿಹಿಡಿದು ಕದನಕ್ಕೆ ಪ್ರಾರಂಭಿಸಿಬಿಟ್ಟರು. ಇಬ್ಬರೂ ಆಟಪ್ರಿಯರೆ, ಆದರೆ ಹೇಡಿಗಳಾಗಿರಲಿಲ್ಲ. ರಾಜ– ರಾಜಗೌರವ ಎಂಬ ಸಂಕೇತಕ್ಕೆ ಅವರು ಮನ್ನಣೆ ಕೊಡದಿದ್ದರೂ ಧೈರ್ಯದಿಂದ ಕಾದಾಡುತ್ತಿದ್ದರು. ಕತ್ತಿಯ ಅಲಗು ಸೂರ್ಯಕಾಂತಿಯಿಂದ ಹೊಳೆದು ಬೆಳಕು ಬೀರುತ್ತಿತ್ತು. ಕತ್ತಿಯ ಖಟ್ ಖಟ್ ಶಬ್ದ ಕೇಳುತ್ತಿತ್ತು. ಬಹಳ ಹೊತ್ತು ಕಾದಾಟ ನಡೆಯಲಿಲ್ಲ. ಏಟು ಏಟಗೆ ಸಿಕ್ಕಿ, ಪೆಟ್ಟು ತಿಂದು ಇಬ್ಬರೂ ಸತ್ತು ಬಿದ್ದರು. ಶತ್ರುಗಳ ಕೈಗೆ ಸಿಕ್ಕಿ ಬಿದ್ದಿದ್ದ ರಾಜನನ್ನು ಉಳಿಸಲು ಸಾಹಸ ಪಡದ ಈ ಯೋಧರು, ತಮ್ಮ ಚದುರಂಗದ ರಾಜ–ಮಂತ್ರಿಯನ್ನು ಉಳಿಸಿಕೊಳ್ಳಲು ಪರಸ್ಪರ ಕಾದಾಡಿ ಪ್ರಾಣವನ್ನರ್ಪಿಸಿದ್ದರು.

ಕತ್ತಲು ಆವರಿಸುತ್ತಾ ಬಂತು. ಚದುರಂಗದ ಹಾಸು ಹಾಸಿದಂತೆಯೇ ಯಿತ್ತು. ಹಾಸಿನಮೇಲೆ ರಾಜ (ಚದುರಂಗದ) ಮಡಿದ ತನ್ನ ಯೋಧರಿಗಾಗಿ ಕಣ್ಣೀರು ಮಿಡಿಯುವಂತೆ ಕಾಣುತ್ತಿತ್ತು. ಮುರುಕು ಮಸೀದಿಯ ಕತ್ತಲ ಬಾವಲಿಗಳು ಸತ್ತುಹೋದವರನ್ನು ನೋಡುತ್ತಾ ತಲೆತೂಗುತ್ತಿದ್ದಂತೆ ಕಾಣುತ್ತಿದ್ದವು.

# ನನಗೆ ಬಂದ ಆಹ್ವಾನ

ಹೊಸದೊಂದು ಮನೆಯು ನಮ್ಮ ಮನೆಯ ಎದುರಿಗೆ ನಿರ್ಮಾಣವಾಗುತ್ತಿತ್ತು. ನಿರ್ಮಿಸುತ್ತಿದ್ದವರ ಅಥವಾ ಮುಂದೆ ಮನೆಯಲ್ಲಿ ವಾಸಮಾಡತಕ್ಕವರ ಪರಿಚಯ ನನಗಿರಲಿಲ್ಲ. ಹೆಸರಾದ ನಾಡಿಗರ ವಂಶದವರು ಮನೆಯನ್ನು ಕಟ್ಟಿಸಿ ಅಲ್ಲಿ ವಾಸಮಾಡುವರೆಂಬ ವಿಷಯ ನನಗೆ ತಿಳಿದುಬಂದಿತು. ನಾಲ್ಕಾರು ತಿಂಗಳಕಾಲ ಒಂದೇಸಮನೆ ಗೃಹನಿರ್ಮಾಣಕಾರ್ಯ ನಡೆದು, ಕೊನೆಗೆ ನಮ್ಮ ಬೀದಿಯಲ್ಲಿ ಮುಗಿದು ನಿಂತ ಸುಂದರ ಗೃಹವಾಗಿತ್ತು.

ಅಕ್ಕಪಕ್ಕದ ಮನೆಯವರೊಂದಿಗೆ ಕೊಡುವುದಾಗಲೀ ಅಥವಾ ಮಾತನಾಡುವುದಾಗಲೀ ಅದು, ನನ್ನ ಸಂಪ್ರದಾಯಕ್ಕೆ ವಿರುದ್ಧವಾದ ಕೆಲಸ. ಹೀಗಿರುವಲ್ಲಿ, ಹೊಸಮನೆಯ ಹೊಸ ವಿಚಾರದಲ್ಲಿ ನನಗೇನೂ ಕುತೂಹಲವಿರಲಿಲ್ಲ.

ಕಟ್ಟಡ ಮುಗಿದು ರಂಗು ಬಳಿದಿದ್ದರು. ಮನೆಯಲ್ಲಿ ಸುಣ್ಣದವಾಸನೆ ಆರಿಸಲು ನೀರು ಸುರಿವಿ ಧೂಳು ಅಡಗಿಸಿದ್ದರು. ಗೃಹಪ್ರವೇಶ ನಡೆಯ್ಯಬೇಡವೆ? ಶ್ರೀಮಂತಿಕೆ ಹೊರಿ ತೋರಬೇಡವೆ? ಹಾಗೂ ಸುಧಾರಿಸಿದ ಈ ಕಾಲದಲ್ಲಿ, ನಾನಾವಿಧ ಉತ್ಸವ ಮಹೋತ್ಸವ ಆಚರಿಸುವ ಕಾಲದಲ್ಲಿ ಹೇಗೆ?........ನಾನು ಮುಂಜಾನೆ ಅರನಿದ್ದೆಯಲ್ಲಿಯೇ ಎದ್ದು ಹೆದರಿ, ಹೊಸಮನೆಯಲ್ಲಿ ನಡೆಯುತ್ತಿದ್ದ ಚಟುವಟಿಕೆಯನ್ನು ಕಿಟಕಿಯಲ್ಲಿ ಕಂಡೆ.

ಹೊಸಮನೆಯಲ್ಲಿ ಓಡಾಟ ಹೆಚ್ಚಾಗಿ, ಗದ್ದಲ ನಡೆದಿತ್ತು. ಯಾವುದೋ ಗೊತ್ತಾದ ಆಚರಣೆಗೆ ಅವರು ಗದ್ದಲ ನಡೆಸುತ್ತಿರುವರೆಂಬ ಅಂಶ ನನಗೆ ಆಗ ಹೊಳೆಯಿತು. ಹಬ್ಬ ಹುಣ್ಣಿಮೆಯದಿನ, ನನ್ನ ಮನೆಯಲ್ಲಿ ನಡೆಯುವ ಹೆಚ್ಚು ವಿಷಯದಲ್ಲಿಯೇ ಉದಾಸೀನ ತಾಳುವವನಿಗೆ ಬೇರೊಬ್ಬರ ಆಚರಣೆಯು ಗೊಡವೆ ಏಕೆ ಬೇಕು? ಓಡಾಟ ನನಗೆ ರುಚಿಸಲಿಲ್ಲ. ನಾನು ಜಡಸ್ವಭಾವದವನಂತೆ ಇದ್ದೆ.

ತೀರ ಯಾಂತ್ರಿಕ ರೀತಿಯಲ್ಲಿ ಚಲನವಲನಗಳು ನೂತನ ಗೃಹದಲ್ಲಿ ಮುಗಿದು ಮರೆಯಾಗಿತ್ತು. ನಾಡಿಗರ ಮುಂದಾಳು ಅದು ಹಾಗೆ ಆಗ ಬೇಕು, ಇದು ಹೀಗೆ ಆಗಬೇಕು ಎಂಬೀ ಗೊಂದಲದಲ್ಲಿದ್ದನು. ಅವರು ನಡೆಸುತ್ತಿದ್ದ ಗಲಭೆ 'ಗೃಹಪ್ರವೇಶಾರಂಭ' ಎಂಬ ವಿಷಯವನ್ನು ಹೊಸ ದಾಗಿ ಇಲ್ಲಿ ಹೇಳಬೇಕಾಗಿಲ್ಲ. ಹೊಸಮನೆಯಲ್ಲಿ ನಡೆಸುವ ಹೊಸ ಆಚರಣೆ 'ಪ್ರವೇಶಾರಂಭ' ಅಲ್ಲದೆ ಮತ್ತೇನು? ನನ್ನ ಕಿವಿಯಲ್ಲಿ ಯಾರೋ ಆರಂಭೋತ್ಸವ ವಿಚಾರ ತೂರಿದ್ದರು.

ಹಲಕೆಲವು ಚಿತ್ರಗಾರರ ಕೃತಿಯನ್ನು ಗೋಡೆಗೆ ನೇತುಹಾಕಿ, ಹಾರ ಹಾಕಿ ಬೆಳಗಿದ್ದರು. ಆ 'ಶ್ವೇತಕ್ಷೇತ್ರ'ದಲ್ಲಿ ಎಲ್ಲಕ್ಕೂ ಮೊದಲಾಗಿ ಸುಣ್ಣದ ಧೂಳು ಆರಿಸಲು, ಪನ್ನೀರುಹೊಳೆ ಹರಿಸಿದ್ದರು. ನಡೆದು ಹೋಗಲು ಹಾದಿಬಿಟ್ಟು, ರತ್ನಗಂಬಳಿ ಹಾಸಿ ಅತಿಥಿಗಳ ಹಾದಿ ನೋಡು ತ್ತಿದ್ದರು. ಬರುವವರಿಗಾಗಿಯೂ ಮೊದಲು ದೇವರಿಗಾಗಿಯೂ ಅರ್ಪಿಸುವ ಪೂಜಾಫಲದ್ರವ್ಯ ಸಿದ್ಧಮಾಡಿಕೊಂಡಿದ್ದರು.

ಹಬ್ಬ, ಉತ್ಸವ, ಆರಂಭೋತ್ಸವ ಮುಂತಾದ ವಿಶೇಷ ದಿನಗಳಲ್ಲಿ ಆಹ್ವಾನ ಪತ್ರಿಕೆಗಳನ್ನು ಕೊಡುವುದು ಸಹಜವಲ್ಲವೆ? ಈಗ ಎಲ್ಲಕ್ಕೂ ಮುಂಚಿತವಾಗಿಯೇ ಆಹ್ವಾನ ಪತ್ರಿಕೆಗಳನ್ನು ತೀರ ಸಾಮಾನ್ಯ ಸಂದರ್ಭ ಗಳಲ್ಲಿ ಉಪಯೋಗಿಸುವ ಬಳಕೆ ಬಂದಿದೆಯಲ್ಲವೆ? ಹಾಗೆಯೇ ಸಿರಿವಂತ ರಾದ ನಾಡಿಗರ ಮನೆಯಲ್ಲಿಯೂ 'ಆಹ್ವಾನ' ಪತ್ರಿಕೆ ಅಚ್ಚಾಗಿ, ಅತಿಥಿ ಗಳಿಗೆ ಸಿದ್ಧವಾಗಿತ್ತು. ಪತ್ರಿಕೆ ಹಂಚುವ ವಹಿಯನ್ನು ನಾಡಿಗರ ಒಡೆಯ ನಿಗೆ ಬಿಟ್ಟುಕೊಟ್ಟು ಉಳಿದವರು ಇತರ ಕೆಲಸಗಳಲ್ಲಿ ಮಗ್ನರಾಗಿದ್ದರು.

ಮೂರು ದಿನ ಮುಂಚಿತವಾಗಿಯೇ ಕರೆಯಿಸಿಕೊಳ್ಳುವ ಅತಿಥಿಗಳಿಗೆ 'ಆಹ್ವಾನಿಕೆ' ತಲುಪಿರಬಹುದು. ಪತ್ರಿಕೆಗಳೇನೋ ಬಹಳ ಒಡೆಯ ನಿಂದ ಮಾಯವಾಗಿದ್ದವು. ಗೃಹಪ್ರವೇಶ, ಒಟ್ಟಿನಲ್ಲಿ ಸುಲಭವಾಗಿ ಸುಸೂತ್ರವಾಗಿ ನಡೆಯಲು ಸಿದ್ಧವಾಗಿತ್ತು.

ಹಿಂದಿನ ಸಂಜೆ, ನಾನು ಆರು ಘಂಟೆಯ ಸಮಯಕ್ಕೆ ಅಂಚೆ ಕಛೇರಿಯ ಕಡೆ ಹೋಗಿದ್ದೆ. ಹೊತ್ತು ಮೀರಿದಂತೆ ಕಂಡಿತು. ಬರೆದು

ತಂದ ಕಾಗದ, ನಾಳೆ ಸಾಧ್ಯವಿಲ್ಲದಿದ್ದಲ್ಲಿ ನಾಡಿದ್ದಾದರೂ ವಿಳಾಸದಾರರಿಗೆ ಸೇರಿದರೆ ಮುಗಿಯಿತೆಂದು ನಾನು ಕಾಲುಹಾಕುತ್ತಿದ್ದೆ. ಹಿಂದೆ ನನ್ನನ್ನು ಯಾರೋ ಅನುಸರಿಸಿ ಬರುತ್ತಿರುವುದಾಗಿ ಕಂಡಿತು. ನೋಡಲು, ನಾಡಿಗರ ಪೈಕಿ ಯಾರೋ ಪರಿಚಯವಿಲ್ಲದಿದ್ದವರು ಅನುಸರಿಸಿ ಬರುತ್ತಿದ್ದರು.

'ನಮ್ಮ ಮನೆಯ ಎದುರಿಗೆ ವಾಸವಾಡುತ್ತಿರುವವರು ತಾವೆ!' ಎಂದು ಮಾತನಾಡಿಸುತ್ತಾ ಅಂಚೆ ಆಫೀಸಿನವರೆವಿಗೂ ನನ್ನೊಡನೆ ಬಂದರು. ಇತರ ಯಾವ ವಿಚಾರವನ್ನೂ ಹೇಳದೆ ಯಾವುದೋ ಮಾತಿನ ಭರದಲ್ಲಿ ನಡೆದುಬಂದರು. ಅಂಚೆ ಆಫೀಸಿನ ಎಲ್ಲಾ ಶಾಖೆಗಳೂ ಹೊತ್ತು ಮೀರಿದ್ದರಿಂದ ಬಂಧಿಸಲ್ಪಟ್ಟಿತ್ತು. ಅಂಚೆಟಿಕೀಟು ಕಾಲಕ್ಕೆ ಸಿಗದೆಂದು ನಾನು ನನ್ನ ಕಾಗದಕ್ಕೆ ಮನೆಯಿಂದ ತರುವಾಗಲೇ ಟಿಕೀಟು ಅಂಟಿಸಿದ್ದೆ. ಆ ಕಾರಣ ಅಂಚೆ ಡಬ್ಬಿಗೆ ಕಾಗದ ತುರುಕಲು ನನಗೆ ಹೆಚ್ಚುವೇಳೆ ಬೇಕಾಗಿರಲಿಲ್ಲ. ನನ್ನ ಕಾಗದ ಡಬ್ಬಿ ಸೇರಿತು.

ಆಫೀಸಿನವರೆವಿಗೂ ನನ್ನೊಡನೆ ಬಂದ ಗೆಳೆಯರು, ಟಿಕೀಟು ಮಾರುವ ಸ್ಥಳಕ್ಕೆ ಹೋಗಿ ಬಾಗಿಲು ಹಾಕಿದುದನ್ನು ನೋಡಿ ನಿರಾಶರಾದರು, ನನ್ನಲ್ಲಿ ಅಂಚೆಟಿಕೀಟು ಉಳಿದಿವೆಯೋ ಎಂದು ಕೇಳಿ ನಿರಾಶರಾದವರು ಶತಪಥ ತಿರುಗಾಡುತ್ತಿದ್ದರು. ನಾನು ಮನೆಯ ಕಡೆಗೆ ತಿರುಗಿದ್ದೆ.

ಮುಂಜಾನೆಗೆ ಮುಂಚೆಯೇ ಎದುರುಮನೆಯ ಬಾಗಿಲಲ್ಲಿ ಮಂಗಳ ವಾದ್ಯಗಳು ಆರಂಭವಾಗಿ ಅತಿಥಿಗಳ ಹಿಂಡು ಗೃಹಪ್ರವೇಶ ನಡೆಸಿತ್ತು. ವಾದ್ಯಗಳು ನಾನು ತೂರಿಕೆಯಿಂದ ಎದ್ದೇಳುವಂತೆ ಮಾಡಿ ನಿದ್ರೆ ಕೆಡಿಸಿತ್ತು. ಸತ್ಕಾರ, ವಿನಯ, ಶಾಸ್ತ್ರಸೂತ್ರಗಳು ಸಾವಕಾಶವಾಗಿ ನಡೆದು, ಬೀದಿಯಲ್ಲಿ ಹೋಗುತ್ತಿದ್ದವರನ್ನು ಬೆರಗುಗೊಳಿಸಿತು. ಮಂಗಳ ಮುಂದುವರಿದು, ಗೃಹಪ್ರವೇಶ ಧಾರಾಳವಾಗಿ ನಡೆಯುತ್ತಿರಲು, ನಿಯಮಿತಕಾಲದಲ್ಲಿ ನಮ್ಮ ಬೀದಿಗೆ ಬರುತ್ತಿದ್ದ ಅಂಚೆಯವನು ನನಗೆ ಕಾಣಿಸಿಕೊಂಡನು.

ಕಾಗದಕ್ಕೆ ಪ್ರತಿಕಾಗದವನ್ನೇ ನಿರೀಕ್ಷಿಸದ ನಾನು ಆಶ್ಚರ್ಯದಿಂದ ನಮ್ಮ ಮನೆಯ ಕಡೆಗೆ ಬರುತ್ತಿದ್ದ ಅಂಚೆಯವನನ್ನು ಕುತೂಹಲದಿಂದ ನೋಡುತ್ತಿದ್ದೆ. ಅವನು ಮನೆಗೆ ಪ್ರವೇಶಮಾಡಿದುದಲ್ಲದೆ, ನನಗೆ ಬಂದ

ಕಾಗದವನ್ನು ಕೈಗಿತ್ತ. ನಾನು ಬೆದರಿದೆ. ಕಾಗದದ ಒಕ್ಕಣೆ ತಿಳಿಯಲು ಆತುರದಿಂದ ನಾನು, ಕಾಗದ ಕೈಸೇರಿದಕೂಡಲೇ ಅಂಚೆಯವನನ್ನು ಮರೆತೆ. ನನ್ನ ಕೈಗೆ ಕಾಗದವಿತ್ತು ಅಂಚೆಯವನು ಕೈಯೊಡ್ಡಿ ನಿಂತಿದ್ದ. ಟಿಕೀಟು ಹಚ್ಚದೆ ಕಾಗದವನ್ನು ಡಬ್ಬಿಗೆ ಹಾಕಿದ ಅಪರಾಧಕ್ಕಾಗಿ ನಾನು ಅವನಿಗೆ ಕಾಣಿಕೆ ಸಲ್ಲಿಸಬೇಕಾಯಿತು. ಒಂದೂವರಾಣೆ ಅವನಿಗೆ ಸಂದಾಯ ವಾಯಿತು.

ಕಾಗದ ಒಡೆದುನೋಡಿದೆ. ಕಾಗದವಲ್ಲ ಅದು – ಆಹ್ವಾನಪತ್ರಿಕೆ ಯಾಗಿತ್ತು. ಎದುರುಮನೆಯಲ್ಲಿ ಅತಿಥಿಗಳನ್ನು ಒಡೆಯರು ಸ್ವಾಗತಿಸು ತ್ತಿದ್ದಾಗಲೇ ಮಂಗಳವಾದ್ಯಗಳು ಮೊಳಗುತ್ತಿದ್ದಾಗಲೇ ನನ್ನಿಂದ "ಆಹ್ವಾನ ಪತ್ರಿಕೆ" ಒಂದೂವರಾಣೆ ಕಾಣಿಕೆ ಪಡೆದಿತ್ತು. ಇದೆಲ್ಲವೂ ಹಿಂದಿನ ಸಂಜೆ ಆಗುಂತಕ ಗೆಳೆಯರ ಅವಸರದ ಕೆಲಸವೆಂದು ನಾನು ತೀರ್ಮಾನ ಮಾಡಿ ಕೊಂಡೆ.



# ಗಂಡು-ಹೆಣ್ಣು

ಬಹಳ ಹಿಂದೆ, ಗಂಡು ತೀರ ಹುಚ್ಚುತನದಿಂದ ವರ್ತಿಸುತ್ತಿದ್ದ. ಅವನ ಸ್ವಾರ್ಥಬುದ್ಧಿಗೆ ಮಿತಿಯೇ ಇರಲಿಲ್ಲ. ಅವನು, ಸ್ತ್ರೀಯೆಂದರೆ–ಹೆಣ್ಣೆಂದರೆ ತೀರ ಅಸಡ್ಡೆಯಿಂದ, ಅತಿ ಕೀಳೆಂದು ಭಾವಿಸಿ ಕಾಣುತ್ತಿದ್ದ. ಅಲ್ಲದೆ, ಹೆಣ್ಣಿನ ಕೈಯನ್ನು ಕಬ್ಬಿಣದ ಸರಪಳಿಯಿಂದ ಬಿಗಿದು, ಅವಳು ತನ್ನಿಂದ ತಪ್ಪಿಸಿಕೊಳ್ಳದಂತೆ, ಮನೆಗೆಲಸಗಳಿಗೆ ಅಡಚಣೆಯಾಗದಂತೆ ಬಂಧಿಸಿದ್ದ.

ಹೆಣ್ಣೂ ಸಹ, ಗಂಡು ತನ್ನನ್ನು ಭಾವಿಸಿರುವಂತೆ ಸೇವಕಳೆಂದು–ತೊತ್ತೆಂದು ತಿಳಿದು ಅವನ ಸಹವರ್ತಿನಿಯಾಗಿ ನಡೆಯುತ್ತಾ ಬಂದಳು. ಅವಳು ಸೇವಕಳೆಂದು ಪರಿಗಣಿಸಲ್ಪಟ್ಟಳು. ಅವಳ ಮನಸ್ಸಿನಲ್ಲಿ ಯಾವ ಭಾವನೆಯಿದ್ದಿತೋ ಯಾರೂ ಹೇಳಲಾಗುತ್ತಿರಲಿಲ್ಲ. ಹೆಣ್ಣು ಮನೆಗೆಲಸವನ್ನು ಮನಸ್ಸಿಟ್ಟು ಮೆಚ್ಚುಗೆಯಿಂದ ಮಾಡುತ್ತಿದ್ದಳು. ಮನೆಯನ್ನು ಚೊಕ್ಕಟವಾಗಿಟ್ಟುಕೊಂಡು, ಅಡಿಗೆಮಾಡಿ; ಇರುಳಾದಕೂಡಲೇ ದೇವರೆದುರು ದೀಪ ಹೊತ್ತಿಸಿಟ್ಟು, ಮನೆಯನ್ನೂ ಗಂಡನ್ನೂ ಸುರಕ್ಷಿತವಾಗಿಟ್ಟು ಕಾಪಾಡಿಕೊಂಡು ಬರುತ್ತಿರಲೆಂದು ಪ್ರಾರ್ಥಿಸುತ್ತಿದ್ದಳು. ಗಂಡಿಗೆ ಆಹಾರ, ಪಾನೀಯ ಮತ್ತು ದೇವರ ಪೂಜೆಗೋಸ್ಕರ ಪುಷ್ಪ ಪರಿಮಳವನ್ನು ತಂದು ಸಿದ್ಧಪಡಿಸುತ್ತಿದ್ದಳು. ಹೆಣ್ಣು ಇಷ್ಟುಮಾಡಿದರೂ ಸ್ವಾರ್ಥಬುದ್ಧಿಯ ಗಂಡು, ಈ ಸೇವೆಯನ್ನು ಗಣನೆಗೆ ತಾರದೆ, ಅಲಕ್ಷ್ಯದಿಂದಲೇ ಹೆಣ್ಣನ್ನು ಎಂದಿನಂತೆ ಕಾಣುತ್ತಿದ್ದ. ಸ್ವಾರ್ಥಬುದ್ಧಿಯ ಪರಮಾವಧಿ ಸೃಷ್ಟಿಕರ್ತ ಪರಮಾತ್ಮನಿಗೆ ಮುಟ್ಟಿತು. ಗಂಡು ಸ್ವಾರ್ಥ ತುತ್ತತುದಿಯಿಂದ "ಇಷ್ಟೆಲ್ಲವೂ ಇವಳೇಕೆ ಮಾಡುತ್ತಾಳೆ ತಿಳಿಯದೇ! ಗಂಡಿಲ್ಲದೆ ಇವಳಿಗೆ ಉಳಿಗಾಲವೇ ಇಲ್ಲ" ಎಂದು, ಹೇಳುತ್ತಿದ್ದ.

ಸೃಷ್ಟಿಕರ್ತ ಪರಮಾತ್ಮ ಈ ಗಂಡಿನ ವರ್ತನೆ ಗ್ರಹಿಸಿ ತಲೆದೂಗುತ್ತಾ "ಈಗ ಇವನನ್ನು ಸ್ವಲ್ಪ ಆಟವಾಡಿಸೋಣ" ಎಂದು ಮನಸ್ಸುಮಾಡಿದ.

ಗಂಡು ತನ್ನ ಯಾವುದೋ ಬಯಕೆಯ ಬೇಟೆಯಲ್ಲಿದ್ದಾಗ, ಪರ

ಮಾತ್ರ ಅವನ ಹೆಣ್ಣನ್ನು ಗಂಡಿನ ದೃಷ್ಟಿಯಿಂದ ಅಡಗಿಸಿಬಿಟ್ಟುಬಿಟ್ಟ. ಹೆಣ್ಣು, ಗಂಡಿನ ದೃಷ್ಟಿವೈಶಾಲ್ಯದಿಂದ ದೂರವಾಗಿ ನಿಂತುಬಿಟ್ಟಳು.

ಆ ದಿನ ಗಂಡು ಮನೆಗೆ ಬಹಳ ಹಸಿವಿನಿಂದ ಅತಿ ಬಾಯಾರಿಕೆಯಿಂದ ಬಳಲುತ್ತ ಬಂದಿದ್ದ. ಬಂದಿದ್ದವನು, ನಿತ್ಯವೂ ತನಗಾಗಿ ಸಿದ್ಧವಾಗುತ್ತಿದ್ದ ವಸ್ತುಗಳ ಕಡೆಗೆ ಗಮನ ಹರಿಸಿದ. ಯಾವ ವಸ್ತುವೂ ಅವನ ಕಣ್ಣಿಗೆ ಬೀಳಲಿಲ್ಲ. ಆಹಾರ, ಪಾನೀಯ, ದೇವಾಪೂಜಾ ಸಾಮಗ್ರಿಗಳು ಅಣಿಯಾಗಿಟ್ಟಿರಲಿಲ್ಲವೆಂಬುದು ಅವನಿಗೆ ತಿಳಿಯಿತು. ಅಲ್ಲದೆ, ಅವನ ತೊತ್ತಾಗಿ ವರ್ತಿಸುತ್ತಿದ್ದ ಹೆಣ್ಣೂ ಗಂಡಿಗೆ ಗೋಚರಿಸಲಿಲ್ಲ. ಹಸಿವಿನಿಂದ ತಲ್ಲಣಿಸುತ್ತಿದ್ದ ಗಂಡು, ಭಯಂಕರವಾಗಿ ಗರ್ಜಿಸುತ್ತಾ ಅತಿಯಾಗಿ ಮುದ್ದಿನಿಂದ ಬೆಳೆದ ಸೊಕ್ಕಿದ ಮಗು ಯಾವುದೋ ಬೇಕಾದ ವಸ್ತುವಿಗೆ ಕಾಡಿ, ತಲೆಗೂದಲನ್ನು ಕಿತ್ತುಕೊಂಡು ಅತ್ತು ಹಠಮಾಡುವಂತೆ, ಹೆಣ್ಣನ್ನು ಗಟ್ಟಿಯಾಗಿ ಕೂಗಿ ಕರೆಯುತ್ತಾ ರೇಗಾಡಿದ.

ಹೆಣ್ಣಿನ ಬದಲಾಗಿ ಸೃಷ್ಟಿಕರ್ತ ಗಂಡಿನ ಮುಂದೆ ಕಾಣಿಸಿಕೊಂಡು "ಏಕೆ ಕೂಗಾಡುತ್ತಿದ್ದೀಯೇ ?" ಎಂದು ಮಧುರವಾಗಿ ಕೇಳಿದ.

"ಕಾರಣವೇನೆಂದು ತಿಳಿಯೆಯಾ ? ನನಗೆ ಆಹಾರ, ಪಾನೀಯ, ಪೂಜಾದ್ರವ್ಯಗಳನ್ನು ಒದಗಿಸುತ್ತಿದ್ದ ನಿರ್ಭಾಗ್ಯ ಆ ಹೆಣ್ಣೆಲ್ಲಿ?" ಎಂದು ಗರ್ಜಿಸಿದ.

"ಇಷ್ಟೇಯೆ! ಅವುಗಳನ್ನೆಲ್ಲಾ ನಿನಗೆ ಒದಗಿಸಿದರಾಯಿತಲ್ಲವೆ?" ಎಂದು, ಸೃಷ್ಟಿಕರ್ತ ಕೇಳಿದ.

"ಹೌದು" ಎನ್ನುತ್ತಾ ಗಂಡು ಗೊಣಗಾಡಿದ.

ಸೃಷ್ಟಿಕರ್ತನ ಪ್ರವೇಶದಿಂದ ಗಂಡಿಗೆ, ನಿತ್ಯವೂ ಒದಗುತ್ತಿದ್ದ ಆಹಾರ, ಪಾನೀಯ, ಪೂಜಾದ್ರವ್ಯಗಳು ಕಾಣದ ಕೈಮೂಲಕ ಹೊತ್ತಿಗೆ ಸರಿಯಾಗಿ ದೊರೆಯಲಾರಂಭವಾಯಿತು. ಆದರೆ, ಹೆಣ್ಣು ಮಾತ್ರ ಕಾಣಲಿಲ್ಲ.

ಗಂಡು ತೀರ ಮಾರ್ಮಿಕವಾದ, ವಿವರಿಸಲಾಗದ, ಪೂರ್ಣವಾಗಿ ಕೈಬಿಟ್ಟುಹೋದಂತಹ ವಸ್ತು-ಹೆಣ್ಣನ್ನು ಕಾಣದೆ; ಉಳಿದೆಲ್ಲವನ್ನೂ ಕಾಣುತ್ತಿದ್ದ. ಆಹಾರ, ಪಾನೀಯ, ಪೂಜಾದ್ರವ್ಯಗಳು ಪ್ರತಿಯೊಂದು ಪ್ರತ್ಯೇಕ

ಪ್ರತ್ಯೇಕವಾಗಿ ನಿರ್ಜೀವ ವಸ್ತುಗಳಾಗಿ ಅವನಿಗೆ ಕಂಡವು. ಕೊನೆಗೆ ಆಹಾರ ಪಾನೀಯಗಳು ಅವನಿಗೆ ಬೇಸರವಾಯಿತು. ರುಚಿಯನ್ನು ಕಳೆದು ಕೊಂಡವನಂತೆ ಅವುಗಳನ್ನು ತಿರಸ್ಕರಿಸಲಾರಂಭಿಸಿದ. ಮಧುರವಿಲ್ಲದ ಪಾನೀಯ, ರುಚಿಯಿಲ್ಲದ ಆಹಾರ, ಸುವಾಸನೆಯನ್ನೂ ಅಂದವನ್ನೂ ಕಳೆದುಕೊಂಡಂತಹ ಹೂವು ಗಂಡಿನ ಮೆಚ್ಚುಗೆ ಹೇಗೆ ಪಡೆದೀತು? ಕಾಲ ಕಾಲಕ್ಕೆ ಬಂದೊದಗುತ್ತಿದ್ದ ಆ ವಸ್ತುಗಳು ತನ್ನನ್ನು ಕೆಣಕಿ ಹಾಸ್ಯಮಾಡು ತ್ತಿವೆಯೆಂದವನು ತಿಳಿದುಕೊಂಡ. ಇಷ್ಟೇ ಅಲ್ಲದೆ, ಈ ಎಲ್ಲ ಕೈವಾಡವು ಅಘರ್ಮಿೀಯ ಹೃದಯವಿಲ್ಲದವನಿಂದ ನಡೆಯುತ್ತಿದೆಯೆಂದು ಭಾವಿಸಿ ಸಹಿಸಲಾರದೆ ಕೂಗಾಡಿದ.

ಒಂದು ದಿನ ಗಂಡು ನಿತ್ಯದ ದುಡಿತ ಮುಗಿಸಿ, ಬೇಸತ್ತು ಜಡನಾಗಿ ಮನೆಗೆ ಬಂದ. ವಸ್ತುಗಳೆಲ್ಲವು ಎಂದಿನಂತೆ ಅವನಿಗೆ ಸಿದ್ಧವಾಗಿದ್ದವು. ಇದ್ದಕ್ಕಿದ್ದ ಹಾಗೆ ಹುಚ್ಚು ಆವೇಶದಿಂದ ಗಂಡು ಆಹಾರವನ್ನೆಲ್ಲಾ ಚೆಲ್ಲಿ, ಪಾನೀಯವನ್ನು ಸುರವಿ, ದೇವರಿಗಾಗಿಟ್ಟಿದ್ದ ಪುಷ್ಪವನ್ನು ಕಿತ್ತಾಡಿ ರಾಕ್ಷಸ ನಂತೆ ಪ್ರಳಯವನ್ನೇ ಮಾಡಿದ.

ಸೃಷ್ಟಿಕರ್ತ ಗಂಡಿನ ಮುಂದೆ ಕಾಣಿಸಿಕೊಂಡು "ಹೀಗೇಕೆ ಮಾಡು ತ್ತೀಯೆ?" ಎಂದು ಕೇಳಿದ.

ಗಂಡು ಗುಡಿಗುಡಿಸುತ್ತಾ "ಹೃದಯವಿಲ್ಲದ ಈ ಕ್ರಿಯೆಯಿಂದೇನು? ನನಗೆ ಯಾವುದೂ ಬೇಡ. ಹೆಣ್ಣನ್ನು ಹಿಂದಕ್ಕೆ ಕೊಡು" ಎಂದ.

ಸೃಷ್ಟಿಕರ್ತ ಗಂಡಿನ ಮಾರ್ಪಾಡನ್ನು ಕಂಡು ಹಸನ್ಮುಖದಿಂದ ಅವನಿಗೆ ಹೆಣ್ಣನ್ನು ದಯಪಾಲಿಸಿದ.

ಅಂದಿನಿಂದ ಗಂಡು ಹೆಣ್ಣನ್ನು ಕಬ್ಬಿಣದ ಸರಪಳಿಯಿಂದ ಬಂಧಿಸದೆ, ಆ ಬಂಧನವನ್ನು ಹರಿಸಿ ಕೈಗಳೆರಡಕ್ಕೆ ಬಂಗಾರದ ಬಳೆಯನ್ನು ತೊಡಿಸಿದ. ಮುತ್ತಿನಮಾಲೆಯನ್ನು ಹೆಣ್ಣಿನ ಕೊರಳಿಗೆ ಕಟ್ಟಿ ಹೆಚ್ಚು ಶೋಭಿಸುವಂತೆ ಮಾಡಿದ. ತಾನು ಪಾಠ ಕಲಿತಂದಿನಿಂದ ಗಂಡು, ಸಂಕುಚಿತ – ಸ್ವಾರ್ಥ ಬುದ್ಧಿಯನ್ನು ತೊರೆದು, ಹೆಣ್ಣನ್ನು ಹೃದಯಕ್ಕಪ್ಪಿಕೊಂಡ. ಅವನು ಕೊನೆಗೆ ಭಾವಪರವಶನಾಗಿ "ನೀನು ನನ್ನ ತೊತ್ತಲ್ಲ, ಮಧುರಗೀತದ ನುಡಿ. ನನ್ನ ಇಡೀ ಬಾಳಬಯಲನ್ನು ತುಂಬಿ ಮೆರೆಯುವಂತಹ ಹೆಣ್ಣೆಂದು" ಹೇಳಿದ.

# ದುರಂತ ಪ್ರಕರಣ

ತಂಪು ನೆಳಲಲ್ಲಿ ಕಪ್ಪುಹೆಜ್ಜೆ ಅಡಿಯಿಟ್ಟು ಮುಂದೂಡಿತ್ತು. ಬೀಡನಾ ಪ್ರದೇಶದ ನೆಲೆಯಲ್ಲಿ ನೀಳವಾದ ವೃಕ್ಷಶಾಖೆಗಳ ಮನೋಹರವಾದ ದೃಶ್ಯ ಬೆಳೆಗಿತ್ತು. ಸಂಧ್ಯೆ, ಆಳನೋಟದಲ್ಲಿ ಕ್ರೀಡೆಯಾಗಿ ಕಂಡು ಭವನ, ಬಯಲು, ಹುಲ್ಲುಗಾವಲೆನ್ನದೆ ರಂಗು ಅರಯಿಸಿ ಮೆರೆಯುತ್ತಿದ್ದಳು. ರವಿ, ಮಾಯಲು ಹೊರಟಿರುವವನಂತೆ ದಿಗಂತದಲ್ಲಿ ತೇಲುತ್ತಾ ಮರೆಯಾಗುತ್ತಿದ್ದನು. ಹೀಗೆ ಶಾಂತಿ ಸಮ್ಮಿಳನ ವೇಳೆಯಲ್ಲಿ ಬೀಡನಾ ಪ್ರದೇಶದ ವಿಶಾಲ ಭವನವೊಂದರಿಂದ, ವಂಗಕವಿ ರಾಧಾಮೋಹನರು ಎಂದಿನಂತೆ ಸಂಜೆ ಬಯಲಲ್ಲಿ ಅಡ್ಡಾಡಲು ತೆರಳಿದ್ದರು.

ಪಾಟ್ನಾ ಕಾಲೇಜಿನಲ್ಲಿ ಹಲವಾರು ವರ್ಷ ಅಧ್ಯಾಪಕರಾಗಿದ್ದು ಕೀರ್ತಿಗಳಿಸಿ, ನಿವೃತ್ತರಾಗಿ, ಈಗ ತಮ್ಮ ರೈತಾಪಿ ಜನರೊಂದಿಗೆ ಉಳಿದು ಕಾಲ ಯಾಪನೆಮಾಡಲು, ಬೀಡನದ ನೆಲೆಯಲ್ಲಿ ಸೇರಿದ್ದರು. ಹಳ್ಳ, ತಿಟ್ಟು, ಬಯಲು ನೆಳಲೆನ್ನದೆ ಸಾವಧಾನಚಿತ್ತದಿಂದ ತಮ್ಮ ಎಂದಿನ ಮೆಚ್ಚುಗೆಯ ಸ್ಥಾನಕ್ಕೆ ಹೊರಟಿದ್ದರು. ಮನೆಯಲ್ಲಿ ಕವಿಗೆ ಸಂತೋಷ ನೆಮ್ಮದಿ ತರುವ ವಸ್ತುವು ಹಾಸಿಗೆ ಹಿಡಿದು ಮಲಗಿತ್ತು. ಅವರ ಪತ್ನಿ ಮಾಲತೀದೇವಿಯು ಯಾವಜ್ಜೀವವೂ ಸೇವಾವೃತ್ತಿಗೆಂದು ಟೊಂಕಕಟ್ಟಿ ನಿಂತಿದ್ದಳು. ಮೋಹನರಿಗೆ ಆಕೆಯ ಸಹಾನುಭೂತಿ ಅರ್ಥಸ್ಫೂರ್ತಿಯಾಗಿ ತೋರಿ ಸಹಾಯಕವಾಗಿತ್ತು. ಈಗ ಹಾಸಿಗೆ ಹಿಡಿದು ರೋಗಪೀಡಿತಳಾಗಿ, ಕವಿಯ ಅಶಾಂತತೆಗೆ ಕಾರಣಳಾಗಿದ್ದಳು.

ಗೂಢಭಾವವೊಂದು ಕಡೆ, ಅಶಾಂತತೆಯ ನೆಳಲೊಂದು ಕಡೆ, ಕವಿಯ ಚಿತ್ತದಲ್ಲಿ ತುಮುಲಯುದ್ಧ ನಡೆಸುತ್ತಿತ್ತು. ದಾರಿ ನಡೆದು ಚಿಂತನೆಯಲ್ಲಿಯೇ ಮೋಹಕ ತಾಣ ಸೇರಿ ಅನೇಕ ಗಂಟೆಗಳ ಕಾಲ ಭಾವಸಮಾಧಿಯಲ್ಲಿದ್ದು ತಂಪುನೆಲೆಯಲ್ಲಿ ವಿಹರಿಸಿ ಭವನಕ್ಕೆ ಹಿಂದಿರುಗುತ್ತಿದ್ದರು. ಇದು ಇವರ ನಿತ್ಯದ ಪರಿಪಾಠ ಮತ್ತು ಕಾವ್ಯವನದ ವಿವರಣೆ. ಭವನ ಬಿಟ್ಟು ಮೋಹನರು ಹೊರಟರೆಂದರೆ ಪ್ರದೇಶದ ಒಕ್ಕಲಿಗರು ಅವರಿಗೆ ದಾರಿಬಿಟ್ಟು,

ಕೈಮುಗಿದು ತಾವಾಗಿಯೇ ದೂರವಾಗಿ ಬಿಡುತ್ತಿದ್ದರು. ರಾಧಾಮೋಹನ ರೆಂದರೆ ಬೀಡನ ನೆಲೆಯ ಜನರಿಗೆ ಅತಿಶಯ ಪ್ರೀತಿ.

ಕವಿಗಳು ಶಾಂತಪ್ರಿಯರು, ಪ್ರೇಮಿಗಳು, ಸೌಂದರ್ಯೋಪಾಸನೆ ಯಲ್ಲಿ ಮೈಮರೆತು ತಲ್ಲೀನರಾಗುವುದು ಅವರ ಸ್ವಾಭಾವಿಕ. ಬಳ್ಳಿಲತೆ ಗಳೂ, ಬೆಳೆವ ಹೂಗಿಡಗಳೂ ಮೋಹನರಿಗೆ ಗಂಭೀರ ಶಾಂತತೆಯನ್ನು ತರು ತ್ತಿದ್ದವು. ನೆಲೆಯು ಮೆಚ್ಚುಗೆಯಾಗಿತ್ತು. ಇತರ ಬಾಹ್ಯ ವ್ಯವಹಾರವನ್ನು ತ್ಯಜಿಸಿ ಮಹಾಯೋಗಿಗಳಂತೆ ಧ್ಯಾನನಿಷ್ಠರಾಗಿ ಉಳಿದು ಜೀವನ ನಡೆಸು ತ್ತಿದ್ದರು. ಪತ್ನಿ ಮಾಲತಿದೇವಿಯ ರೋಗಪೀಡನೆ ಅವರ ಸ್ಮೃತಿಗೆ ಬಂದಿ ತೆಂದರೆ ಖಿನ್ನರಾಗಿ ಕಳೆಗುಂದುತ್ತಿದ್ದರು.

ಭವನದಲ್ಲಿ ಪತ್ನಿ ಶುಶ್ರೂಷೆಯು ಮುಂಜಾವಿನಿಂದ ಸಂಜೆವರೆವಿಗೂ ಮೋಹನರು ನಡೆಸುತ್ತಿದ್ದರು. ಸಹಾಯಕಳಾಗಿ ಅವರ ಕುಮಾರಿ ಮೃಣಾ ಲಿನಿಯು ತಾಯಿ ಸೇವೆಯಲ್ಲಿ ತಾನೂ ಭಾಗಿಯಾಗಿದ್ದಳು. ಆಗಾಗ್ಗೆ ಭವನ ಮೂಲೆ ಸೇರಿ ದುಃಖ ತೋಡಿಕೊಂಡು ಕಣ್ಣೀರು ಮಿಡಿದಹಾಗೆ ದಿನ ತಳ್ಳಿತ್ತು. ದೀರ್ಘ ನರಳುವಿಕೆಯ ಫಲವಾಗಿ ಮಾಲತೀದೇವಿಯು ಮೃತ್ಯು ಮಂದಿರಕ್ಕೆ ಹಾಯ್ದು, ಕವಿ ಮತ್ತು ಕುವರಿಯನ್ನು ದುಃಖಕ್ಕೆ ಈಡು ಮಾಡಿಟ್ಟು, ನೆಮ್ಮದಿಯ ಮನೆಯಲ್ಲಿ ದುಃಖಥಾಳಿ ತೂರಿದ್ದಳು.

ವಿಯೋಗದುಃಖದ ಹೊರೆ ಮೋಹನರನ್ನು ಮಾರ್ಪಡಿಸಿತು. ಕುಳಿ ತಲ್ಲಿಯೇ ಉಳಿದು ಯಾವುದೋ ಬಗೆಹರಿಯದ ಚಿಂತೆಯಲ್ಲಿ ಮುಳುಗಿ ಕಂದಿಹೋಗುತ್ತಿದ್ದರು. ಅವರ ದೀರ್ಘಕಾಯ ಕುಗ್ಗಿಹೋಗಿ, ಸುಕ್ಕಿಬಿದ್ದು, ಗೆಲುವು ಮೊಗದಲ್ಲಿ ಜಾಡ ವಿರಕ್ತಭಾವ ಎದ್ದು ಮೂಡಿತ್ತು. ತಲೆಗೂದಲನ್ನು ಹರಡಿಕೊಂಡು ಯಾವುದನ್ನೂ ಲೆಕ್ಕಿಸದೆ ತಾವೇ ಮಾತನಾಡಿಕೊಳ್ಳುತ್ತಾ, ಅಖಂಡವಾದ ಸೊಂಪುನೆಲೆಯಲ್ಲಿ ಕೃತಿಗೈದು ಉಲ್ಲಾಸದಲ್ಲಿರುತ್ತಿದ್ದ ಮೋಹ ನರು, ಸೊಂಪಿನ ಮಧ್ಯೆ ತಂಪು ಈಗ ಹೀರಲಾರದೆ ಅಲೆಯುತ್ತಿದ್ದರು.

ವಯಸ್ಸು ಮೀರಿ, ದುಃಖ ಬೀಡುಮಾಡಿಕೊಂಡು, ದೃಷ್ಟಿಪಥವನ್ನು ಮಂಜುಮಾಡಿತ್ತು. ಯಾರ ಸಹಾಯವೂ ಬೇಡದೆ ಸ್ವೇಚ್ಛೆಯಾಗಿ ಕಾವ್ಯ ವಿಹಾರದಲ್ಲಿರುತ್ತಿದ್ದ ಕವಿಗೆ, ಸಹಾಯಕರೊಬ್ಬರು ಅವರ ಜೀವನ ಸಂಜೆಯಲ್ಲಿ ಬೇಕಾಯಿತು. ದಾರುಣದುಃಖ ನುಂಗಿಕೊಂಡು ಮೃಣಾಲಿನಿ

ತಂದೆ ಯಾವ ವಿಧದಲ್ಲಾದರೂ ಸುಖಿಸಲೆಂದು, ಆತನ ಕೋರಿಕೆಯಂತೆ ಅನುಸರಿಸಿದ್ದಳು.

ಬೀಡನ ಪ್ರದೇಶದ ಒಕ್ಕಲಿಗರು ತಮ್ಮ ಒಡೆಯನಿಗೆ ತೋರುತ್ತಿದ್ದ ಪ್ರೀತಿಯನ್ನು ಕಾಲಕ್ರಮೇಣ ತೊರೆದಿದ್ದರು. ಕವಿ ಅಂಧನಾಗಿ ಭವನ ದಲ್ಲಿಯೇ ಉಳಿದಾಗ ಅವರು ಹಾಗೆ ಕಾಣುವುದಕ್ಕೆ ಕಾರಣವಾಯಿತು. ಶಿಸ್ತು ಪೂರ್ಣವಾಗಿ ಮೋಹನರ ನೆಲೆಯಲ್ಲಿ ನಾಶವಾಯಿತು. ಈಗ ಕವಿ ಚೇತನವಿಹೀನನಾಗಿ ಭವನದಲ್ಲಿ ನಿಂತಾಗ, ಆಚರಣೆ ಸಡಲಿತಲ್ಲದೆ ರೈತಾಪಿ ಜನರು ಅಡ್ಡದಾರಿ ಹಿಡಿದಿದ್ದರು. ಕಲಹ, ಭಿನ್ನಾಭಿಪ್ರಾಯ ಮತ್ತು ಒಳ ಜಗಳ ತಲೆಹಾಕಿ ಅವರಲ್ಲಿ ಭೀಕರವಾಗಿ ರೂಪುಗೊಂಡಿದ್ದವು.

ಕೃಷಿಗೆ ಮಳೆಯು ಮುಖ್ಯಾಧಾರ. ಬೀಡನ ನೆಲೆಯಲ್ಲಿ 'ವರ್ಷಧಾರೆ' ಪೂಜೆಯ ಸಲುವಾಗಿ ಪ್ರತಿವರ್ಷವೂ 'ವರ್ಷಮಂಗಳ' ಉತ್ಸವವು ಆಚರಣೆ ಯಲ್ಲಿತ್ತು. ಮೊದಲಾಗಿ ಮೋಹನರು ನೆಲೆಸುವುದಕ್ಕೆ ಮುಂಚೆಯೇ ಈ ಹಬ್ಬವನ್ನು ಆರಂಭಿಸಿದ್ದರು. ಉತ್ಸವ ಸಮಾರಂಭದಲ್ಲಿ ಹೇರಳ ಹಣ ವ್ಯಯಮಾಡಿ ವಿಜೃಂಭಣೆಯಿಂದ ಉತ್ಸವ ನೆರವೇರಿಸಿ ಭಕ್ತಿಯಿಂದ 'ವರ್ಷ ಧಾರೆ'ಯು ನೆಲೆಯನ್ನು ಅವಲೋಕಿಸುವಂತೆ ಬೇಡುತ್ತಿದ್ದರು. ಪೂಜೆ ಮಹಿಮೆಯಿಂದಲೋ ಎಂಬಂತೆ ಸಾಕಷ್ಟು ಮಳೆಯಾಗಿ ಕೃಷಿಗೆ ಏಳಿಗೆ ಯಾಗಿತ್ತು.

ಒಂದು "ವರ್ಷಮಂಗಳ" ಉತ್ಸವ ದಿನದ ಸಂಜೆಯಲ್ಲಿ ಮೋಹನರು ಕಳೆಗುಂದಿ ಭವನ ಕೋಣೆಯೊಂದರಲ್ಲಿ ಉಳಿದು ಕರುಣಾಮಯವಾಗಿ ದುಃಖ ಗೀತೆಯೊಂದನ್ನು ತೋಡಿಕೊಳ್ಳುತ್ತಿದ್ದರು. ಪ್ರದೇಶದಲ್ಲಿ ವೈಭವ ಉತ್ಸವ ತೊಡಿಗೆ ಆರಂಭವಾಗಿತ್ತು. ಮೃಣಾಲಿನಿ ದೂರದ ಒಂದು ಕಿಟಕಿಯ ಹತ್ತಿರ ನಿಂತು ತಂದೆಯ ಸ್ಥಿತಿಯನ್ನು ಕಂಡು ಮರುಗಿ ನೋಡುತ್ತಿದ್ದಳು. ಉತ್ಸವ ಭರದಲ್ಲಿ ಓಡಾಡುತ್ತಾ, ನಿಯಮ ನೀತಿಯನ್ನು ಬಿಟ್ಟು ಹಾರಾಟವಾಡುತ್ತ ಆಡಂಬರದಲ್ಲಿ ಮೆರೆದ ರೈತರು ಕೂಗಾಡುವುದರಲ್ಲಿ ಸಂಜೆ ಮುಗಿದು ಇರುಳಾಗಿತ್ತು.

ದೀಪ ಹೊತ್ತಿಗೆ ಎತ್ತಿ ಮನಸ್ಸು ಬಂದ ರೀತಿ ಹಚ್ಚಹಸುರೊಂದಿಗೆ ಕುಣಿಯಲು ನೆಲೆಯವರು ಮೊದಲುಮಾಡಿ ಸಂಭ್ರಮದಲ್ಲಿ ಮೈಮರೆದರು.

ಬಯಲ ಮಂಟಪದಲ್ಲಿ ದೀಪವೊಂದು ಉರುಳಿ ಹೊತ್ತಿಕೊಂಡು ಜ್ವಾಲೆಯಾಗಿ ಎಲ್ಲವನ್ನೂ ನುಂಗಿ ಸವಿದುನೋಡಿತ್ತು. ಹಾಹಾಕಾರದ ಕೂಗು, ಗದ್ದಲ ಸದ್ದು, ಕೇಳಿಬಂದು ಎಲ್ಲರನ್ನೂ ಎಚ್ಚರಿಸಿದಾಗ, ಯಾವುದಕ್ಕೂ ಗಮನಿಸದ ಮೋಹನರು ಗಲಭೆಗೆ ದೂರವಾಗಿ ಭವನದಲ್ಲಿ ಬೇಸತ್ತು ಮಲಗಿದ್ದರು. ಕೂಗಿಗೆ ಕಾರಣ ತಿಳಿಯಲು ಮೃಣಾಲಿನಿ ಮಂಟಪದೆಡೆಗೆ ಧಾವಿಸಿದಳು. ಅಷ್ಟರಲ್ಲಿ ಹೊಡೆದಾಟ, ಬಡಿದಾಟವು ಕಾರಣವಾಗಿ ಹಬ್ಬಹುಯಿಲಲ್ಲಿ ಉರುಳಿತು. ಉತ್ಸಾಹದಾಳುಗಳ ಹೋರಾಟದ ನಡುವೆ ಪೆಟ್ಟಿಗೆ ಸಿಕ್ಕಿ ಬಿದ್ದು ಮೃಣಾಲಿನಿಯು ಜ್ಞಾನತಪ್ಪಿದಳು.

ನಡುರಾತ್ರಿಯ ಲೀಲೆಯಲ್ಲಿ ನೆಲೆಯು ತಣ್ಣಗಾದಾಗ ರಾಧಾಮೋಹನರ ಮಗಳನ್ನು ರೈತರು ಕೊಲೆಗೈದಿದ್ದರು. ಉಪಚರಿಸಲು ಕೈಮೀರಿ ಸಾಧ್ಯವಿಲ್ಲದೆ ನಿರಾಶರಾಗಿಹೋಗಿ ಭವನಕ್ಕೆ ಶರೀರವನ್ನು ಹೊತ್ತುಕೊಂಡು ನಡೆದು ಸದ್ದಿಲ್ಲದ ರಾತ್ರಿಯಲ್ಲಿ ಕೃತ್ಯ ನಡೆಸಿದ್ದರು. ಮೋಹನರು ನಿದ್ರೆಯಿಂದೆಚ್ಚೆತ್ತು ಕುಮಾರಿಯ ಹೆಸರಿಡಿದು ಚೀತ್ಕಾರಮಾಡಿದರು. ಮೂಕರಾಗಿ ನಿಂತ ಆಳುಗಳು ಅವರ ಸ್ಥಿತಿಯನ್ನು ಕಂಡು ಮರುಗಿ ತಲೆತಗ್ಗಿಸಿ ಕಳೇಬರಹವನ್ನು ಮುಂದಿಟ್ಟು ಸರ್ವವನ್ನೂ ವಿವರಿಸಿ ಪಶ್ಚಾತ್ತಾಪಪಟ್ಟರು.

ಇಡೀ ಜೀವನದಲ್ಲಿ ಒಂದರ ಹಿಂದೆ ಒಂದಾಗಿ ದುಃಖದಾವರಣ ನೆಲೆಯಲ್ಲಿ ನೊಂದ ಮೋಹನರು ದುಃಖದ ಎಲ್ಲೆ ಮೀರಿ ಚೀತ್ಕಾರ ಮೂಡಿ ಮೂರ್ಛೆಹೋದರು. ಜೀವನಸಂಜೆಯಲ್ಲಿ ಮೃತ್ಯು ಸುಳಿದು ತನ್ನೊಡನೆ ಅವರನ್ನೂ ಸೆಳೆದುಕೊಂಡು, ಬೀಡನದ ಜನರು ತಮಗಾಗಿ ನಂದಿಹೋದ ಜೀವಕ್ಕೆ ಕಣ್ಣೀರು ಸುರಿಸುವಂತೆ ಮಾಡಿದ್ದನು.

---